# ಕಲಿಕೆಯ ತೊಂದರೆಗಳನ್ನುಳ್ಳ ವಿದ್ಯಾರ್ಥಿಗಳಿಗೆ ಓದಿಕೆಯ ಗ್ರಹಿಕೆಯನ್ನು ಸುಲಭವಾಗಿಸುವ ಸಾಧನವಾಗಿ ಪಾಠದ ಅನುಕೂಲನ (adaptation)

**ವೀಣಾ ವೆಂಕಟರಾಮು, ಶ್ವೇತಾ ಚಂದ್ರಶೇಖರ್, ನೇಹಾ ಪಂತ್**

ನೀವು ಓದಿದ್ದನ್ನು ಗ್ರಹಿಸುವುದನ್ನು ಕುರಿತ ಕಾರ್ಯ ಹಾಳೆಗಳನ್ನು (worksheets) ಗೂಗಲ್‌ನಲ್ಲಿ ಹುಡುಕಿದಾಗ ನಿಮಗೆ ಒಂದಷ್ಟು ಪ್ಯಾಸೇಜ್‌ಗಳು ಮತ್ತು ಪ್ರಶ್ನೆಗಳ ರಾಶಿಯೇ ದೊರೆಯುತ್ತವೆ. ನಿಮಗಿದು ಪರಿಚಿತ ನೋಟವೇ ಅಲ್ಲವೇ?! ಸಾಮಾನ್ಯವಾಗಿ, ಓದಿದ್ದನ್ನು ಅರ್ಥಮಾಡಿಕೊಳ್ಳುವ ಏಕೈಕ ಮಾರ್ಗವಾಗಿ ಪ್ರಶ್ನಿಸುವಿಕೆಯು ಕಂಡುಬರುತ್ತದೆ. ಮತ್ತು ಅನಿವಾರ್ಯವಾಗಿ, ಇದು ಇಂಗ್ಲಿಷ್ ವಿಷಯದ ಸಂದರ್ಭದಲ್ಲಿ ಹೆಚ್ಚಾಗಿದ್ದು, ಬಹುಶಃ ಸಮಾಜ ವಿಜ್ಞಾನಕ್ಕೂ ವಿಸ್ತರಿಸಬಹುದು.  ಅದೃಷ್ಟವಶಾತ್ ಗಣಿತ ತರಗತಿಯಲ್ಲಿ ಅಥವಾ ರಸಾಯನಶಾಸ್ತ್ರದ ಪ್ರಶ್ನೆಪತ್ರಿಕೆಯಲ್ಲಿ ಅವುಗಳು ಕಾಣಸಿಗುವುದಿಲ್ಲ! ತಮಾಷೆಯನ್ನು ಬದಿಗಿಟ್ಟು ನೋಡುವುದಾದರೆ, ಈ ರೀತಿಯಾಗಿ ಪ್ಯಾಸೇಜ್ ಅನ್ನು ನೀಡಿ, ಅನಂತರ ಪ್ರಶ್ನೆಗಳು ಕಾಣಿಸಿಕೊಳ್ಳುವ ವಿಧಾನವು ಹೆಚ್ಚಾಗಿ ಓದಿದ್ದರ ಗ್ರಹಿಕೆಯ ಮೌಲ್ಯಮಾಪನವಾಗಿದೆ. ಹಾಗಾದರೆ ಓದಿಕೆಯ (reading) ಗ್ರಹಿಕೆಯನ್ನು ಸ್ಪಷ್ಟವಾಗಿ ಕಲಿಸುವ ವಿಧಾನಗಳು ಯಾವುವು? ನಾವು ನಮ್ಮ ಅನುಭವಗಳನ್ನು ಹಂಚಿಕೊಳ್ಳುವ ಮೊದಲು, ಓದಿದ್ದನ್ನು ಗ್ರಹಿಸುವ ಮತ್ತು ಅದನ್ನು ಕಲಿಸುವ ವಿಧಾನಗಳ ಸಂದರ್ಭಗಳು ಹೇಗಿರುತ್ತವೆ ಎಂದು ಬಹಳ ಸಂಕ್ಷಿಪ್ತವಾಗಿ ತಿಳಿಸಿ; ಅನಂತರ ಈ ಲೇಖನದ ಮುಖ್ಯ ವಿಷಯವನ್ನು ಪರಿಶೀಲಿಸಲು ಬಯಸುತ್ತೇವೆ.

## ಓದಿಕೆಯ ಗ್ರಹಿಕೆ

"ರೀಡಿಂಗ್ ಮೇಕೆತ್ ಅ ಮ್ಯಾನ್" (ಓದುವಿಕೆಯು ಮನುಷ್ಯನನ್ನು ರೂಪಿಸುತ್ತದೆ) ಎಂಬ ಗಾದೆಯು ಇಂದಿಗೂ ಚಾಲ್ತಿಯಲ್ಲಿದೆ. – ಪ್ರಪಂಚವು ಉತ್ತಮ ಹಳೆಯ ಶೈಲಿಯ ಪುಸ್ತಕಗಳಿಂದ ಹಿಡಿದು ಕಿಂಡಲ್‌ನಲ್ಲಿ ದೊರೆಯುವ ಪುಸ್ತಕಗಳವರೆಗೆ ವಿವಿಧ ಮೂಲಗಳಿಂದ ದೊರೆಯುವ ನಿರಂತರವಾದ ಸರಣಿ ಮಾಹಿತಿಯ ಮೇಲೆ ನಡೆಯುತ್ತದೆ. ಇಂದಿನ ಓದುಗನು ಈ ಸಂಕೀರ್ಣತೆಗಳನ್ನು ನಿರ್ವಹಿಸುವ ಅಗತ್ಯವಿದೆ. ಭಾಷಾ ಕೌಶಲ್ಯವನ್ನು ಅರ್ಜಿಸುವ ಕ್ರಮದಲ್ಲಿ, ಓದುವಿಕೆ ಮತ್ತು ಓದಿದುದರ ಗ್ರಹಿಕೆಯು ಮೌಖಿಕ ಭಾಷೆ ಮತ್ತು ಲಿಖಿತ ಅಭಿವ್ಯಕ್ತಿಗಳ ನಡುವೆ ಇಡಿ ಕಿರಿದಿದೆ. ಸಂವಹನ, ಜ್ಞಾನಾರ್ಜನೆ ಮತ್ತು ಸಾಕ್ಷರತೆಯ ಈ ಎರಡು ಅಗತ್ಯ ಕೌಶಲ್ಯಗಳ ನಡುವಿನ ಸೇತುವೆ ಎಂದು ಇದನ್ನು ಪರಿಗಣಿಸಲಾಗಿದೆ.

ಓದಿಕೆಯ ಗ್ರಹಿಕೆಯು ಒಂದು ಸಂಕೀರ್ಣ ಪ್ರಕ್ರಿಯೆಯಾಗಿದ್ದು ಓದುಗನು ಲಿಖಿತ ಪದದೊಂದಿಗೆ ಹೊಂದಿರುವ ಸಂಬAಧವಾಗಿದೆ. ಓದುಗನು ತಾನು ಏನನ್ನು ಓದುತ್ತಾನೋ ಅದರ ಮೂಲಕ ಆಳವಾದ ಅರ್ಥವನ್ನು ರೂಪಿಸುತ್ತಾನೆ. ಏನನ್ನು ಅರ್ಥ ಮಾಡಿಕೊಳ್ಳಲಾಗಿದೆ ಎಂಬುದು ಓದುಗರ ಹಿಂದಿನ ಜ್ಞಾನ, ಅನುಭವ ಮತ್ತು ಓದುವಿಕೆ ನಡೆಯುವ ಪರಿಸರದಿAದ ಪ್ರಭಾವಿತವಾಗಿರುತ್ತದೆ. ಪರಿಸ್ಥಿತಿಯ ಸಂದರ್ಭ ಅಥವಾ ಪರಿಸರ: ಅಂದರೆ ಓದುವಿಕೆಯು ಮನೆ ಅಥವಾ ತರಗತಿಯಲ್ಲಿ ಆಗುತ್ತಿದೆಯೇ, ಲೈಬ್ರರಿಯಂತಹ ಶಾಂತ ಸ್ಥಳದಲ್ಲಿ ಆಗುತ್ತಿದೆಯೇ, ಪರೀಕ್ಷೆಯ ಸಮಯದಲ್ಲಿ ನಡೆಯುತ್ತಿದೆಯೇ ಎಂಬುದು ಓದುವಾಗ ಪಠ್ಯವನ್ನು ಹೇಗೆ ಗ್ರಹಿಸಲಾಗುತ್ತದೆ ಎಂಬುದರ ಮೇಲೆ ಪರಿಣಾಮ ಬೀರುತ್ತದೆ. ವಿಸಂಕೇತಿಕರಣ, ಮುದ್ರಣ ದೃಷ್ಟಿಕೋನ ಮತ್ತು ಜ್ಞಾನ, ನಿರರ್ಗಳತೆ, ಶಬ್ದ-ಸಂಪತ್ತಿನ ಕೌಶಲ್ಯಗಳು, ಗಮನ ಮತ್ತು ಸ್ಮರಣೆಯಲ್ಲಿನ ಸ್ವಯಂಚಾಲಿತತೆಯು ನಿರರ್ಗಳತೆಯ ರೀತಿಯಲ್ಲಿಯೇ ಓದಿಕೆಯ ಗ್ರಹಿಕೆಗೂ ಸಹ ಪೂರ್ವಾಪೇಕ್ಷಿತವಾಗಿದೆ. ಆದರೆ ನಿರರ್ಗಳತೆ ಮತ್ತು ಸ್ವಯಂಚಾಲಿತತೆಯು ಒಂದೇ ಅಲ್ಲ. ನಿರರ್ಗಳತೆ ಎಂದರೆ ಪಠ್ಯದಲ್ಲಿನ ವಿಷಯವನ್ನು ಸಲೀಸಾಗಿ ಮತ್ತು ಅಭಿವ್ಯಕ್ತಿಯೊಂದಿಗೆ ಒಂದಕ್ಕೊಂದು ಸಂಬಂಧ ಬೆಸೆಯುತ್ತಾ ಓದುವುದು. ವೈಗೋಟ್ಸ್ಕಿಯ ಸಾಮಾಜಿಕ ರಚನೆ ಮತ್ತು ಕಲಿಕೆಯ ಸಂದರ್ಭವು ಇಲ್ಲಿ ಉಲ್ಲೇಖಾರ್ಹವೆನಿಸುತ್ತದೆ. ಓದಿಕೆಯ ಗ್ರಹಿಕೆಯು ವೈಯಕ್ತಿಕ ಚಟುವಟಿಕೆಯಾಗಿದ್ದರೂ ಸಹ, ತರಗತಿಯಲ್ಲಿನ ಸಾಮಾಜಿಕ ಚಟುವಟಿಕೆಯ ಭಾಗವಾಗಿ, ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಅಥವಾ ಪೋಷಕರು ಮತ್ತು ಮಕ್ಕಳು ಒಟ್ಟಿಗೆ ಓದಿ ಮತ್ತು ಚರ್ಚಿಸಿ ಅರ್ಥವನ್ನು ರೂಪಿಸುವ ಮೂಲಕ ಅದನ್ನು ವರ್ಧಿಸಬಹುದು.

ಓದುವ ತಂತ್ರಗಳು ಮತ್ತು ಕಲಿಕೆಯು ಒಂದಕ್ಕೊಂದು ಹೆಣೆದು ಕೊಂಡಿರುತ್ತವೆ. ಅಂದರೆ ಕಲಿಕಾರ್ಥಿಗಳು ಒಂದು ಪಠ್ಯ ಅಥವಾ ಕೆಲಸಗಳ ವಿಷಯವನ್ನು ಅರ್ಥಮಾಡಿಕೊಳ್ಳುವಲ್ಲಿ ವಿಫಲರಾಗಿದ್ದರೆ, ಕಲಿಕೆಯು ಸವಾಲಾಗುತ್ತದೆ ಇಲ್ಲವೇ ಅಸಾಧ್ಯವಾಗುತ್ತದೆ. ವಿದ್ಯಾರ್ಥಿಯು ಶಾಲೆಯಲ್ಲಿ ಮುಂದಿನ ತರಗತಿಗಳಿಗೆ ಹೋದಂತೆ, ವಿಷಯವು ಹೆಚ್ಚು ಸಂಕೀರ್ಣವಾಗುತ್ತದೆ, ಹೆಚ್ಚು ಗಹನವಾಗಿರುತ್ತದೆಯಲ್ಲದೆ, ಓದುವಿಕೆ ಮತ್ತು ನಿಖರತೆಯಲ್ಲಿ ಹೆಚ್ಚು ಪ್ರಾವೀಣ್ಯದ ಅಗತ್ಯವಿರುತ್ತದೆ. ಓದುವ ತಂತ್ರಗಳು ಉತ್ತಮವಾಗಿದ್ದಷ್ಟೂ, ಮುಂಚಿತವಾಗಿ ಅವುಗಳನ್ನು ಆರ್ಜಿಸಿ ಕೊಂಡಷ್ಟೂ ಪರಿಣಾಮಕಾರಿ ಕಲಿಕೆಯ ಅವಕಾಶಗಳು ಹೆಚ್ಚುತ್ತವೆ. ವೈವಿಧ್ಯಮಯ ಮತ್ತು ಸಮೃದ್ಧ ಶಬ್ದ-ಜ್ಞಾನದ ಕೊರತೆ, ಧ್ವನಿ ವಿಜ್ಞಾನದ ಪ್ರಕ್ರಿಯೆಗಳಲ್ಲಿನ ಕೊರತೆ, ಸಮಂಜಸ ಬೋಧನಾ ಗ್ರಹಿಕೆಯ ತಂತ್ರಗಳ ಅಭಾವ, ಪ್ರೇರಣೆಯ ಕೊರತೆ ಮತ್ತು ಅಜಾಗರೂಕತೆಯು ಓದಲು ಕಷ್ಟಪಡುವ ವರಪಠ್ಯದ ಗ್ರಹಿಕೆಯ ಮೇಲೆ ಪ್ರಭಾವ ಬೀರಬಹುದು.

ತೀವ್ರವಾದ ನಿರ್ದಿಷ್ಟ ಕಲಿಕೆಯ ತೊಂದರೆಗಳು, ಚಂಚಲತೆ ಮತ್ತು ಅತಿ ಚಟುವಟಿಕೆಯ ಕಾಯಿಲೆ (ಅಟೆನ್ಶನ್ಡೆಫಿಸಿಟ್ಹೈಪರ್ ಆಕ್ಟಿವಿಟಿ ಡಿಸಾರ್ಡರ್

(ಎಡಿಎಚ್‌ಡಿ)), ಸ್ವಲೀನತೆ ಸ್ಪೆಕ್ಟ್ರಮ್ ನಿಟ್ಟಿನಲ್ಲಿ ಹೆಚ್ಚಿನ ಕಾರ್ಯನಿರ್ವಹಿಸುವ ಮಕ್ಕಳು, ಶಾಲೆಯನ್ನು ನಿರಾಕರಿಸುವ ಅಸ್ವಸ್ಥತೆ ಮತ್ತು ಇತರ ಮಾನಸಿಕ ಅಸ್ವಸ್ಥತೆಗಳನ್ನು ಹೊಂದಿರುವ ವಿದ್ಯಾರ್ಥಿಗಳಿಗೆ ಬೃಂದಾವನ ಶಿಕ್ಷಣ ಟ್ರಸ್ಟಿ ವಿಶೇಷವಾದ ಪರಿಹಾರ ಕೇಂದ್ರವಾಗಿದೆ. ಕಿರಿಯರ ಕಾರ್ಯಕ್ರಮವು ಸಂಬAಧಿತ ವ್ಯಾಪ್ತಿ ಮತ್ತು ಅನುಕ್ರಮದ ಅನುಸಾರ ಶೈಕ್ಷಣಿಕ ಕೌಶಲ್ಯ ಅಭಿವೃದ್ಧಿ ಮತ್ತು ಪರಿಕಲ್ಪನಾ ಕಲಿಕೆಯತ್ತ ಗಮನವನ್ನು ಕೇಂದ್ರೀಕರಿಸುತ್ತದೆ. ಹಿರಿಯರ ಕಾರ್ಯಕ್ರಮವು ಆಯ್ದ ಎನ್‌ಐಓಎಸ್ (ರಾಷ್ಟ್ರೀಯ ಮುಕ್ತ ಶಾಲಾ ಶಿಕ್ಷಣ ಸಂಸ್ಥೆ) ವಿಷಯಗಳನ್ನು ಮಾಧ್ಯಮಿಕ ಮತ್ತು ಹಿರಿಯ ಮಾಧ್ಯಮಿಕ ತರಗತಿಗಳಿಗೆ (೧೦ನೇ ಮತ್ತು ೧೨ನೇ ತರಗತಿಗಳು) ಬೋಧಿಸುವುದರತ್ತ ಗಮನವನ್ನು ಕೇಂದ್ರೀಕರಿಸುತ್ತದೆ. ವಿದ್ಯಾರ್ಥಿಗಳು ಶೈಕ್ಷಣಿಕವಾಗಿ ತೊಂದರೆಗಳನ್ನು ಎದುರಿಸುವುದು ಮುಂದುವರಿಯುವುದರಿಂದ ಪಠ್ಯಕ್ರಮ ಆಧಾರಿತ ಕೌಶಲ್ಯ ಅಭಿವೃದ್ಧಿಯು ಮುಂದುವರಿಯುತ್ತದೆ.

ಪರೀಕ್ಷೆಗಳೇ ಕೇಂದ್ರ ಬಿಂದು ಆಗಿರುವುದರಿಂದ, ಬೃಂದಾವನದಲ್ಲಿ ದಿನನಿತ್ಯದ ಬೋಧನೆಯಲ್ಲಿ ಓದಿಕೆಯ ಗ್ರಹಿಕೆಯನ್ನು ಕಲಿಸುವಿಕೆಯು ದೊಡ್ಡ ಪಾತ್ರವನ್ನು ವಹಿಸುತ್ತದೆ. ಶೈಕ್ಷಣಿಕ ಸಂದರ್ಭದಲ್ಲಿ ಓದಿಕೆಯ ಗ್ರಹಿಕೆವನ್ನು ವ್ಯವಸ್ಥಿತ ರೀತಿಯಲ್ಲಿ ಬೆಳೆಸಲು ಅದನ್ನು ಸ್ಪಷ್ಟವಾಗಿ ಕಲಿಸಬೇಕಾಗಿದೆ. ಬಹುತೇಕ ಪಠ್ಯವನ್ನು ನಿರೂಪಣಾತ್ಮಕ ಅಥವಾ ವಿವರಣಾತ್ಮಕ ಎಂದು ವಿಂಗಡಿಸಲಾಗಿದೆ. ಹಲವು ವರ್ಷಗಳ ನಿರಂತರ ಸಂಶೋಧನೆ, ಬೋಧನೆಯಲ್ಲಿನ ಪ್ರಯೋಗ ಮತ್ತು ದೋಷದ ವಿಧಾನ (trial & error) ಮತ್ತು ತರಬೇತಿಯ ಮೂಲಕ ಬೃಂದಾವನವು ತಮ್ಮ ವಿದ್ಯಾರ್ಥಿಗಳಲ್ಲಿ ಓದಿಕೆಯ ಗ್ರಹಿಕೆಯನ್ನು ಹೆಚ್ಚಿಸಲು ಬೋಧನೆ ಮತ್ತು ತಂತ್ರಗಳನ್ನು ಬಳಸುವ ವಿಶ್ವಸನೀಯ ಅಭ್ಯಾಸವನ್ನು ಅನುಸರಿಸುತ್ತದೆ. ಅವುಗಳಲ್ಲಿನ ಕೆಲವೆಂದರೆ, ಮುಂಚಿನ ಜ್ಞಾನವನ್ನು ಸಕ್ರಿಯಗೊಳಿಸುವುದು, ಗ್ರಾಫಿಕ್ ಸಂಘಟಕರು, ಪರಿಕಲ್ಪನೆಯ ಪ್ರತಿಚಿತ್ರಣ, ವೆಬ್‌ಗಳು.

- ಪ್ರಶ್ನಿಸುವಿಕೆ (ಬ್ಲೂಮ್‌ನ ವರ್ಗೀಕರಣ)- ಜ್ಞಾನ, ಗ್ರಹಿಕೆ, ಅನ್ವಯಿಕೆ, ವಿಶ್ಲೇಷಣೆ, ಸಂಶ್ಲೇಷಣೆ, ಮೌಲ್ಯಮಾಪನ.
- ಮಾನಸಿಕ ಅಥವಾ ಚಾಕ್ಷುಷ (visual) ಚಿತ್ರಗಳನ್ನು ರಚಿಸುವುದು.
- ಕ್ಲೋಜ್ ಪ್ಯಾಸೇಜ್ಗಳ ಸಾರಾಂಶ ಬರೆಯುವುದು.
- ಮೆಟಾಸಂಜ್ಞಾನಾತ್ಮಕ ತಂತ್ರಗಳು-ಸ್ವ-ನಿಯಂತ್ರಣ ಪರಿಶೀಲನಾ ಪಟ್ಟಿಗಳು, ನಿಯತಕಾಲಿಕಗಳು.
- ಪರಸ್ಪರ ಬೋಧನೆ.
- ತಂತ್ರಜ್ಞಾನದ ಬೆಂಬಲ.
- ಪಠ್ಯದರಚನೆಯನ್ನು ವಿಶ್ಲೇಷಿಸುವುದು- ಗುಂಪಾಗಿ ವಿಂಗಡಿಸುವುದು, ಪಾಠದ ರೂಪಾಂತರ.

ಈ ಲೇಖನದ ಗಮನವು ಪ್ರಾಥಮಿಕವಾಗಿ ಪಾಠದ ರೂಪಾಂತರದ ಮೇಲೆ ಕೇಂದ್ರೀಕೃತವಾಗಿದೆ. ಇದು ವಿಭೇದಿತ ಬೋಧನಾ ವಿಧಾನದ ಮಗುವಾಗಿದ್ದು,

ಓದಿಕೆಯ ಗ್ರಹಿಕೆಯನ್ನು ಹೆಚ್ಚಿಸುವ ಮತ್ತು ಕಲಿಕೆಗೆ ಸಹಾಯಮಾಡುವ ಸಾಧನವಾಗಿದೆ. ವಿಶೇಷ ಶಿಕ್ಷಣದ ಅಗತ್ಯತೆಗಳನ್ನು ಹೊಂದಿರುವ ತರಗತಿಯಲ್ಲಿ ವೈವಿಧ್ಯಮಯ ಕಲಿಕೆಯ ಅಗತ್ಯಗಳನ್ನು ಪೂರೈಸಲು ಇದು ಪ್ರಮಾಣಿತ ಅಗತ್ಯ ಅಭ್ಯಾಸವಾಗಿದ್ದು, ಇದನ್ನು ಬೃಂದಾವನದಲ್ಲಿ ನೀಡಲಾಗುತ್ತದೆ. ಓದುವಿಕೆ ಮತ್ತು ಗ್ರಹಿಕೆಯ ವಿಧಾನವು ಮೂರು ಹಂತದ ವಿಧಾನವಾಗಿದೆ: ಮುಂಚಿನ-ಓದುವಿಕೆ, ಓದುವಿಕೆ ಮತ್ತು ಅನಂತರದ ಓದುವಿಕೆ.

ನಮ್ಮ ವಿಶಿಷ್ಟವರ್ಗ ಸಾಮರ್ಥ್ಯವು ಪ್ರತಿ ತರಗತಿಗೆ ಎಂಟು ವಿದ್ಯಾರ್ಥಿಗಳು. ಅರುವತ್ತು ನ್ಯೂರೋಟಿಪಿಕಲ್ ವಿದ್ಯಾರ್ಥಿಗಳಿಗೆ ಹೋಲಿಸಿದರೆ ಇದು ಬಹಳ ಚಿಕ್ಕ ಸಂಖ್ಯೆಯಾಗಿದೆ. ಆದಾಗ್ಯೂ, ಪ್ರತಿಯೊಬ್ಬ ಕಲಿಕಾರ್ಥಿಯ ವೈವಿಧ್ಯಮಯ ಸಂಕೀರ್ಣ ಅಗತ್ಯಗಳನ್ನು ಪೂರೈಸಲು ಪ್ರತ್ಯೇಕವಾಗಿ ಮತ್ತು ಸಣ್ಣ ಗುಂಪಿನಲ್ಲಿ ಬೋಧಿಸುವ ಅಗತ್ಯವಿದೆ.

ಓದುವ ಮತ್ತು ಓದಿದ್ದನ್ನು ಗ್ರಹಿಸುವ ಸಂದರ್ಭದಲ್ಲಿ, ರೂಪಾಂತರವನ್ನು ರೂಪಾಂತರಿಸಿ ಅಳವಡಿಸಿಕೊಂಡ ಪಠ್ಯಗಳೊಂದಿಗೆ ಗೊಂದಲಕ್ಕೀಡು ಮಾಡಿಕೊಳ್ಳಬಾರದು. ಉದಾಹರಣೆಗೆ, ಟಾಲ್‌ಸ್ಟಾಯ್‌ನ *ವಾರ್ ಅಂಡ್ ಪೀಸ್* ಅAತಹ ಶ್ರೇಷ್ಠ ಸಾಹಿತ್ಯಕ ಕೃತಿಗಳನ್ನು ಅಧಿಕೃತವಾಗಿ ರೂಪಾಂತರಿಸಿ, ಪ್ರಕಟಿಸಿ, ಮಾರಾಟಮಾಡಿ ಮಕ್ಕಳು ಸೇರಿದಂತೆ ಹೆಚ್ಚಿನ ಪ್ರೇಕ್ಷಕರನ್ನು ತಲಪುವಂತೆ ನೋಡಿಕೊಳ್ಳಲಾಗುತ್ತದೆ. ಆದರೆ ನಮ್ಮದು ಆ ರೀತಿಯ ರೂಪಾಂತರವಲ್ಲ.

ಶೈಕ್ಷಣಿಕ ಪಾಠದ ರೂಪಾಂತರವು ಉತ್ತಮ ಕಲಿಕೆಗಾಗಿ ಪಾಠಗಳನ್ನು ಮಾರ್ಪಡಿಸುವ ಒಂದು ತಂತ್ರ, ವಿಧಾನ, ಸಾಧನವಾಗಿದೆ. ರೂಪಾಂತಗಳು ಮೂರು ಕ್ಷೇತ್ರಗಳಾದ್ಯಂತ ಇರಬಹುದು- ಅದನ್ನು ನಾವು ಓದುವ ಮತ್ತು ಓದಿದ್ದನ್ನು ಗ್ರಹಿಸುವ ನಿಟ್ಟಿನಲ್ಲಿ ಮತ್ತಷ್ಟು ವಿವರಿಸಿದ್ದೇವೆ.

a. **ವಿಷಯ:** ಇದು ವಿದ್ಯಾರ್ಥಿಯು ಕಲಿಯಬೇಕಾದ ನಿಜವಾದ ಪಠ್ಯ. ಪ್ರಮುಖ ಪರಿಕಲ್ಪನೆಗಳು ಮತ್ತು ಶಬ್ದ-ಸಂಪತ್ತನ್ನು ಅನ್ಯೂನ (intact)ವಾಗಿ ಇರಿಸಿಕೊಳ್ಳಲು ವಿಷಯವನ್ನು ರೂಪಾಂತರಿಸಬಹುದು. ಇದು ವಿದ್ಯಾರ್ಥಿಯ ಓದುವ ಹೊರೆಯನ್ನು ಕಡಮೆ ಮಾಡುತ್ತದೆ. ಡಿಸ್ಲೆಕ್ಸಿಯಾ (ಓದಲು ಮತ್ತು ಬರೆಯಲು ತೊಂದರೆ ಹೊಂದಿರುವ ಅಸ್ವಸ್ಥತೆ) ಹೊಂದಿರುವ ವಿದ್ಯಾರ್ಥಿಗಳಿಗೆ ಇದು ವಿಶೇಷವಾಗಿ ಉಪಯುಕ್ತವಾಗುತ್ತದೆ. ನಿರ್ದಿಷ್ಟ ಕಲಿಕಾರ್ಥಿಯ ಅಗತ್ಯಗಳಿಗೆ ಸರಿಹೊಂದುವAತೆ ಪಠ್ಯವನ್ನು ಮತ್ತಷ್ಟು ರೂಪಾಂತರಿಸಬಹುದು.
b. ಬೋಧನೆಯ ಪ್ರಕ್ರಿಯೆ ಅಥವಾ ವಿದ್ಯಾರ್ಥಿಗಳಿಗೆ ಪಠ್ಯವನ್ನು ತಲುಪಿಸುವ ಮತ್ತು ಬೋಧಿಸುವ **ಪ್ರಕ್ರಿಯೆ.** ಇದು ವಿದ್ಯಾರ್ಥಿಯು ಪಠ್ಯದೊಂದಿಗೆ ತೊಡಗಿಸಿಕೊಳ್ಳುವುದನ್ನು ಒಳಗೊಂಡಿರುತ್ತದೆ.

ಓದಿದ್ದನ್ನು ಗ್ರಹಿಸುವ ಉತ್ತಮ ವಿಧಾನವೆಂದರೆ ಅದು ಮೂರು ಹಂತದ ವಿಧಾನ –ಮುಂಚಿನ ಓದುವಿಕೆ, ಓದುವಿಕೆ ಮತ್ತು ಅನಂತರದ ಓದುವಿಕೆ. ಪಠ್ಯವನ್ನು ತಮ್ಮ ಸಾಮರ್ಥ್ಯಕ್ಕೆ ತಕ್ಕಂತೆ ಕರಗತ ಮಾಡಿಕೊಳ್ಳಲು ಓದುಗನು ಮೇಲೆ ತಿಳಿಸಿದ ತಂತ್ರಗಳನ್ನು ಅವಲಂಬಿಸಿರುತ್ತಾನೆ.

c. **ಉತ್ಪನ್ನ**- ಪಠ್ಯದ ಮೌಲ್ಯಮಾಪನ. ಇಲ್ಲಿ ವಿದ್ಯಾರ್ಥಿಗೆ ತಾನು ಕಲಿತದ್ದನ್ನು ಪ್ರದರ್ಶಿಸುವ ಅವಕಾಶ ಕಲ್ಪಿಸಲಾಗುತ್ತದೆ. ಕಷ್ಟದ ಮಟ್ಟಗಳು, ಗುಂಪು ಅಥವಾ ವ್ಯಕ್ತಿಗತ ಕೆಲಸ, ಕಲಿಕೆಯ ಶೈಲಿ ಎಲ್ಲವನ್ನೂ ಪಠ್ಯದ ಗ್ರಹಿಕೆಯನ್ನು ಮೌಲ್ಯಮಾಪನ ಮಾಡಲು ರೂಪಾಂತರಿಸಿಕೊಳ್ಳಬಹುದು.
d. **ಕಲಿಕೆಯ ಪರಿಸರ**-ಇದು ತರಗತಿಯ ರೂಪಾಂತರದ ಮತ್ತು ನಿರ್ವಹಣೆಯ ಭೌತಿಕ ಮತ್ತು ಪರಿಣಾಮಕಾರಿ ಅಂಶಗಳನ್ನು ಒಳಗೊಂಡಿದೆ. ಸುರಕ್ಷಿತ ಕಲಿಕೆಯ ವಾತಾವರಣವನ್ನು ಸೃಷ್ಟಿಸುವುದು ಪ್ರೇರಣೆಯನ್ನು ಹೆಚ್ಚಿಸುತ್ತದೆ. ಇದು ಓದುಗರ ತೊಡಗುವಿಕೆಯ ಒಂದು ದೊಡ್ಡ ಅಂಶವಾಗಿದೆ. ಓದುವ ಮೂಲೆಗೆ ಸರಿಹೊಂದುವAತೆ ತರಗತಿಯನ್ನು ಹಾಗೂ ಸಹಕಾರಿ ಕಲಿಕೆಗೆ ಅನುವಾಗುವಂತೆ ಆಸನದ ವ್ಯವಸ್ಥೆಯನ್ನು ರೂಪಾಂತರಿಸಬಹುದು.
e. ಬೋಧನೆಗೆ ಅನುವಾಗುವಂತೆ ಪಠ್ಯವನ್ನು ಹೇಗೆ ರೂಪಾಂತರಿಸಲಾಗಿದೆ ಎಂಬುದರ ಎರಡು ಮಾದರಿಗಳು ಇಲ್ಲಿವೆ. ಓದಿದ್ದರ ಗ್ರಹಿಕೆಯನ್ನು ಹೆಚ್ಚಿಸಲು ಮತ್ತು ಕಲಿಕೆಗೆ ಸಹಾಯ ಮಾಡಲು ಬೋಧನಾ ಪ್ರಕ್ರಿಯೆ ಮತ್ತು ತಂತ್ರಗಳನ್ನು ಯಶಸ್ವಿಯಾಗಿ ಪ್ರದರ್ಶಿಸುತ್ತೇವೆ ಎಂದು ನಾವು ಆಶಿಸುತ್ತೇವೆ. ಮೊದಲನೆಯದನ್ನು ಎನ್‌ಸಿಇಆರ್‌ಟಿ ಪಠ್ಯಪುಸ್ತಕಕ್ಕಿಂತ ಮುಂಚೆಯ-ಎನ್‌ಐಓಎಸ್ಮಟ್ಟಕ್ಕೆ ಹೊಂದುವಂತೆ (ಸರಿಸುಮಾರು ಗ್ರೇಡ್೯) ರೂಪಾಂತರಿಸಲಾಗಿದೆ. ಎರಡನೇ ಮಾದರಿಯನ್ನು ಇಂಗ್ಲಿಷ್‌ನ ಜೂನಿಯರ್ಎನ್‌ಐಓಎಸ್ (೧೦ನೇ ತರಗತಿ) ತರಗತಿಗೆ ಹೊಂದುವಂತೆ ರೂಪಾಂತರಿಸಲಾಗಿದೆ.

**ಮಾದರಿ ೧- ಥಾರ್ಮರು ಭೂಮಿ.**

**ಥಾರ್ಮರು ಭೂಮಿ**ಯನ್ನು ಗ್ರೇಟ್ ಇಂಡಿಯನ್ ಮರುಭೂಮಿ ಎಂದೂ ಕರೆಯುತ್ತಾರೆ.

ಭಾರತೀಯ ಮರುಭೂಮಿಯು ಅರಾವಳಿ ಬೆಟ್ಟಗಳ ಪಶ್ಚಿಮದ ಅಂಚಿನಲ್ಲಿದೆ. ರಾಜಸ್ಥಾನ ರಾಜ್ಯ ಮತ್ತು ಗುಜರಾತ್‌ನ ಭಾಗಗಳನ್ನು ಒಳಗೊಂಡಿರುವ ಇದು, ಬರ್ಚನ್ಸ್ (ಅರ್ಧಚಂದ್ರಾಕಾರದ ದಿಬ್ಬಗಳು) ಎಂದು ಕರೆಯಲ್ಪಡುವ ಮರಳಿನ ದಿಬ್ಬಗಳಿಂದ ಆವೃತವಾದತ ರಂಗಿತ ಮರಳು ಬಯಲು ಪ್ರದೇಶವಾಗಿದೆ.







Glossory: - ಪದಕೋಶ:

1. Undulating – up and down, wavy form like waves in an ocean – ತರಂಗಿತ- ಸಾಗರದಲ್ಲಿನ ಉಬ್ಬು-ತಗ್ಗಿನ, ತರಂಗದ ರೂಪದ ಅಲೆಗಳು.
2. Crescent shaped - ಅರ್ಧಚಂದ್ರಾಕಾರದ
   Like the waning and waxing moon - ಕ್ಷಯಿಸುತ್ತಿರುವ ಮತ್ತು ವರ್ಧಿಸುತ್ತಿರುವ ಚಂದ್ರನಂತೆ
   The blade of the sickle is crescent shaped - ಕುಡುಗೋಲಿನ ಅಲಗು ಅರ್ಧಚಂದ್ರಾಕಾರದಲ್ಲಿದೆ.




Fig. 2 Crescent shaped sand dunes – Barchans

Fig. 2 Crescent shaped sand dunes – Barchans –ಚಿತ್ರ. 2 ಅರ್ಧಚಂದ್ರಾಕಾರದ ಮರಳು ದಿಬ್ಬಗಳು- ಬರ್ಚನ್ಸ್.




Fig. 3 The undulating sandy plains

Fig. 3The undulating sandy plains –ಚಿತ್ರ. 3 ತರಂಗಿತ ಮರಳುಬಯಲು ಪ್ರದೇಶ

ಈ ಪ್ರದೇಶವು ವರ್ಷಕ್ಕೆ ೧೫೦ ಮಿ.ಮೀ. ಗಿಂತ ಕಡಮೆ ಮಳೆಯನ್ನು ಪಡೆಯುತ್ತದೆ. ಇದು ಕಡಮೆ ಸಸ್ಯವರ್ಗದ (ಒಂದು ನಿರ್ದಿಷ್ಟ ಪ್ರದೇಶದಲ್ಲಿ, ಕೃಷಿ ಮಾಡದೆಯೇ ಸ್ವಾಭಾವಿಕವಾಗಿ ಬೆಳೆದ) ಹೊದಿಕೆಯೊಂದಿಗೆ ಶುಷ್ಕ (ಬಹಳ ಕಡಮೆ ಮಳೆ ಹಾಗೂ ಒಣಗಿದಂತಿರುವ, ಅಷ್ಟೇನೂ ಸಸ್ಯ ವರ್ಗವಿಲ್ಲದ) ಹವಾಮಾನವನ್ನು ಹೊಂದಿದೆ. ಮಳೆಗಾಲದಲ್ಲಿ ಹೊಳೆಗಳು ಕಾಣಿಸಿಕೊಳ್ಳುತ್ತವೆ. ಸಮುದ್ರವನ್ನು ತಲಪುವಷ್ಟು ನೀರನ್ನು ಹೊಂದಿಲ್ಲದ ಕಾರಣ ಸ್ವಲ್ಪ ಸಮಯದಲ್ಲೇ ಅವು ಮರಳಿನಲ್ಲಿ ಕಣ್ಮರೆಯಾಗುತ್ತವೆ. ಈ ಪ್ರದೇಶದ ಏಕೈಕ ದೊಡ್ಡ ನದಿ ಅಂದರೆ, ಲುನಿ.



ಚಿತ್ರ 4. ರೇಖಾಚಿತ್ರ

ಅರಾವಳಿಯು ನೆಲೆಗೊಂಡಿರುವ ಸ್ಥಾನವು ಮಳೆ ಮಾರುತವು ಬೇರೆಡೆ ಬೀಸುವಂತೆ ಮಾಡುತ್ತದೆ. ಅರಾವಳಿಗಳ ಸ್ಥಾನವು ಬೇರೆಡೆ ಇದ್ದಿದ್ದರೆ (ಚಿತ್ರ 5ನ್ನು ನೋಡಿ) ಅದು ಭಾರೀ ಮಳೆಯನ್ನು ಪಡೆಯುವ ಹೆಚ್ಚಿನ ಸಾಧ್ಯತೆಯಿತ್ತು.

(ಶಿಕ್ಷಕರು ರೇಖಾಚಿತ್ರಗಳನ್ನು ರಚಿಸಿ, ಮಕ್ಕಳಿಗೆ ಅರ್ಥಮಾಡಿಸುವ ಸಲುವಾಗಿ ಅವರಿಗೂ ಸಹ ಅದನ್ನು ರಚಿಸಲು ಹೇಳುತ್ತಾರೆ. ಚಿತ್ರ 5, ಪರಿಕಲ್ಪನೆಯ ತಿಳಿವಳಿಕೆಯನ್ನು ಗಹನವಾಗಿ ಅರ್ಥಮಾಡಿಸಲು ಸಹಾಯ ಮಾಡುವ ಒಂದು ಉದಾಹರಣೆಯೇತರ ಚಿತ್ರ)




ಚಿತ್ರ. 5 ರೇಖಾಚಿತ್ರ2

Rain bearing winds – ಮಳೆ ಮಾರುತ
ಪಾಠ ಯೋಜನೆ- ಥಾರ್ ಮರುಭೂಮಿ

| **ಉದ್ದೇಶಗಳು** | **ಚಟುವಟಿಕೆ ಮತ್ತು ಕಾರ್ಯತಂತ್ರ** | **ಅನುಕೂಲನ (accommodation)** | **ವಸ್ತು** | **ಮೌಲ್ಯಮಾಪನ** |
|---|---|---|---|---|
| ಮುಂಚಿನ ಒದುಮರುಭೂಮಿಯನ್ನು ಕುರಿತಂತೆಮುಂಚಿ | **ಕಾರ್ಯತಂತ್ರ**: ಬುದ್ದಿ ಉತ್ತೇಜನ (brainstorming) | ಅಗತ್ಯವಿರುವವರಿಗೆ ಸುಳಿವು ನುಡಿಗಳನ್ನು ಒದಗಿಸಿ ಸಹಾಯ ಮಾಡುವುದು | ಶಿಕ್ಷಕರು ಅಥವಾ ವಿದ್ಯಾರ್ಥಿಗಳಿಂದ ಪದಗಳನ್ನು ಬರೆಯಲ್ಪಟ್ಟ ಕಪ್ಪುಹಲಗೆ | ಕಪ್ಪುಹಲಗೆಯ ಮೇಲಿರುವ ಪದಗಳನ್ನು ಬಳಸಿಕೊಂಡು ಮರು ಭೂಮಿಯನ್ನು ಬರೆಯಿರಿ. |

| ಉದ್ದೇಶಗಳು | ಚಟುವಟಿಕೆಮತ್ತು ತಂತ್ರ | ಹೊಂದಿಸುವಿಕೆ | ವಸ್ತು | ಮೌಲ್ಯಮಾಪನ |
|---|---|---|---|---|
| ತವಾಗಿ ಅರಿವನ್ನುಪಡೆ ಯುವುದು | | | | ಅಥವಾ ಮರುಭೂಮಿಯ ಸಂಕ್ಷಿಪ್ತ ವಿವರಣೆಯನ್ನು ಬರೆಯಿರಿ (ಚಿತ್ರವನ್ನು ರಚಿಸಲು ಸಾಧ್ಯವಾಗದ ವಿದ್ಯಾರ್ಥಿಗಳಿಗೆ ಇದನ್ನು ನೀಡಲಾಗಿರುತ್ತದೆ) |
| | **ಚಟುವಟಿಕೆ:**<br>ಪದವನ್ನು ಸಂಘಟಿಸುವುದು: ನೀವು ಮರುಭೂಮಿಯೊಂದಿಗೆ ಸಂಯೋಜಿಸಬಹುದಾದ ಪದಗಳ ಬಗ್ಗೆ ಯೋಚಿಸಿ. | | | |
| | **ಕೌಶಲ್ಯಅಭಿವೃದ್ಧಿ:**ಶಬ್ದ ಸಂಪತ್ತು,<br>ಒದಿಕೆಯ ಗ್ರಹಿಕೆ | | | |
| ಒದುವ ಚಟುವಟಿಕೆಯಸಮಯದಲ್ಲಿ– ಥಾರ್ಮರು ಭೂಮಿಯ ಸ್ಥಳದ ಬಗ್ಗೆ ಜ್ಞಾನವನ್ನು ಪಡೆಯುವುದು<br>ಈ ಪ್ರದೇಶವು ಏಕೆಮರು ಭೂಮಿಯಾಗಿದೆ ಎಂಬುದನ್ನು ಅರ್ಥಮಾಡಿಕೊಳ್ಳುವುದು | **ಕಾರ್ಯತಂತ್ರ:**<br>ಶಿಕ್ಷಕರು ವೀಕ್ಷಣ ಸಾಧನವನ್ನು ಬಳಸಿಕೊಂಡು ವಿವರಣೆಗಳನ್ನು ನೀಡುವುದು<br><br>3 ಪ್ಯಾರಾಗಳ ಗುಂಪು ಮಾಡುವುದು: ವಿದ್ಯಾರ್ಥಿಗಳು ಪಠ್ಯದಿಂದ ಒಂದು ಭಾಗವನ್ನು ಒದುತ್ತಾರೆ. ಎಷ್ಟರಮಟ್ಟಿಗೆ ಗ್ರಹಿಸಿದ್ದಾರೆ ಎಂದು ತಿಳಿದುಕೊಳ್ಳಲು ಮೌಖಿಕ ಪ್ರಶ್ನೆಗಳನ್ನು ಕೇಳಲಾಗುತ್ತದೆ | ಪ್ರಮುಖ ಪದಗಳ ಚಿತ್ರಾತ್ಮಕ ಪ್ರಾತಿನಿಧ್ಯವನ್ನು ಒದಗಿಸುವುದು<br><br>ದೊಡ್ಡ ರೇಖಾ ಚಿತ್ರಗಳು | ಥಾರ್ಮರು ಭೂಮಿಯನ್ನು ಚಿತ್ರಿಸುವ ಭಾರತದ ನಕ್ಷೆಗಳು<br><br>ಅರಾವಳಿಗಳ ಸ್ಥಾನ ಮತ್ತು ಮಳೆಯ ಮೇಲೆ ಅದರ ಪರಿಣಾಮವನ್ನು ಚಿತ್ರಿಸುವ ರೇಖಾಚಿತ್ರಗಳು **ಪ್ರಮುಖ ಪದಗಳಿಗಾಗಿ** ಶಬ್ದಾವಳಿ ಪದ ಗೋಡೆ, ಫ್ಲ್ಯಾಶ್‌ಕಾರ್ಡ್‌ಗಳು | ಕೊಟ್ಟಿರುವ ಭಾರತದ ರೂಪರೇಖೆಯ ನಕ್ಷೆಯಲ್ಲಿ ಈ ಕೆಳಗಿನವುಗಳನ್ನು ಗುರುತಿಸಿ- ಥಾರ್ಮರು ಭೂಮಿ, ಅರಾವಳಿಗಳು, ನೈಋತ್ಯ ಮಳೆ ಮಾರುತಗಳ ದಿಕ್ಕು |
| | **ಚಟುವಟಿಕೆ:** ವಿದ್ಯಾರ್ಥಿಗಳು ಅರಾವಳಿಗಳ ಸ್ಥಾನವನ್ನು ಪ್ರತಿನಿಧಿಸುವ ಶಂಕುಗಳನ್ನು ಇಟ್ಟು ಥಾರ್ಮರು ಭೂಮಿಯಲ್ಲಿ ಏಕೆ ಕಡಮೆ ಮಳೆ ಆಗುತ್ತದೆ ಎಂಬುದನ್ನು ವಿವರಿಸುತ್ತಾರೆ. (ಕೋನಗಳ ಬದಲಿಗೆ ವಿದ್ಯಾರ್ಥಿಗಳೇ ಸ್ವತಃ ಪರ್ವತಗಳು, **ಮಾರುತಗಳು** ಮತ್ತು ಅದರ ಪರಿಣಾಮಗಳ ಸ್ಥಾನಗಳಲ್ಲಿ ನಿಂತು ಅವನ್ನು ಪ್ರತಿನಿಧಿಸುತ್ತಾರೆ) | | | ಥಾರ್ಮರು ಭೂಮಿಯು ಮರುಭೂಮಿಯಾಗಿರುವುದಕ್ಕೆ ಕಾರಣಗಳನ್ನು ನೀಡಿ |
| | **ಕೌಶಲ್ಯ ಅಭಿವೃದ್ಧಿ:**<br>ಆಲಿಸುವಿಕೆ<br>ಗ್ರಹಿಕೆ<br>ಒದಿಕೆಯ ಗ್ರಹಿಕೆ<br>ಮೌಖಿಕ ಭಾಷೆ<br>ಸ್ಥಾನಿಕ ಮತ್ತು ಚಲನಾ ಕೌಶಲ್ಯಗಳು | | | |

| | | | | |
|---|---|---|---|---|
| ಓದುವ ನಂತರದ ಚಟುವಟಿಕೆ- ವಿದ್ಯಾರ್ಥಿಗಳುಮರುಭೂಮಿಯ ಜ್ಞಾನವನ್ನು ಅನ್ವಯಿಸುವಂತೆ ಅವರನ್ನು ತಯಾರು ಮಾಡುವುದು | **ಕಾರ್ಯತಂತ್ರ:** ಮನಸ್ಸಿಗೆ ಗೋಚರಿಸುವಂತೆ ಮಾಡುವುದು | ಡಿಸ್ಗ್ರಾಫಿಯಾ ದಿಂದ ಬಳಲುತ್ತಿರುವ ವಿದ್ಯಾರ್ಥಿಗೆ ಬರೆಯಲು ಸಹಾಯ ಮಾಡುವುದು<br><br>ಮೌಖಿಕ ಉತ್ತರಗಳು- ತರಗತಿಯಲ್ಲಿ ದಾಖಲಿಸಲಾದ ಅಥವಾ ವ್ಯಕ್ತಪಡಿಸಲಾದ ಉತ್ತರಗಳು.<br>ವಿವರಣೆಗಳ ಮೂಲಕ ವ್ಯಕ್ತಪಡಿಸುವುದು. | ಕ್ಲೋಜ್ ಪ್ಯಾಸೇಜ್- ಮಾದರಿಯನ್ನು ಕೆಳಗೆ ಲಗತ್ತಿಸಲಾಗಿದೆ | ರೂಪಾಂತರಿಸಿದ ಪಾಠವನ್ನು ಎರಡು ಬಾರಿ ಓದಿ. ಅದನ್ನು ದೂರವಿಟ್ಟು ಕ್ಲೋಜ್ ಪ್ಯಾಸೇಜ್‌ಗೆ ಉತ್ತರಿಸಿ<br><br>ದಿನಪತ್ರಿಕೆಯಲ್ಲಿನ ಲೇಖನವನ್ನು ಓದಿ, ಸಂಕ್ಷಿಪ್ತಗೊಳಿಸಿ ಮತ್ತು ಅದೇ ಲೇಖನಕ್ಕೆ ಪ್ರಶ್ನೆಗಳನ್ನು ರಚಿಸಿ (ಲೇಖನವು ಭವಿಷ್ಯಕ್ಕಾಗಿ ಯೋಜಿಸಲಾದ ಸಂಶೋಧನೆ ಆಧಾರಿತ ಚಟುವಟಿಕೆಯ ಪೂರ್ವಗಾಮಿ ಸಾಧನವಾಗಿ ಕಾರ್ಯನಿರ್ವಹಿಸುತ್ತದೆ) |
| | **ಚಟುವಟಿಕೆ**: ನೀವು" ಮರುಭೂಮಿಯಲ್ಲಿಸಿಲುಕಿಕೊಂಡರೆ ಹೇಗೆ ಬದುಕುಳಿಯುತ್ತೀರಿ?" ಪರಿಕಲ್ಪನೆಯಿಂದಅವರು ಕಲಿತದ್ದನ್ನು ಆಧರಿಸಿ ಅವರ ಕಥೆಯನ್ನು ಬರೆಯಲು ಮತ್ತು ಅದನ್ನು ಓದುವಂತೆ ಅವರನ್ನು ಕೇಳಲಾಗುತ್ತದೆ. | | | |
| | **ಕೌಶಲ್ಯಅಭಿವೃದ್ಧಿ** :ಸೃಜನಶೀಲ ಬರವಣಿಗೆ ಓದಿಕೆಯ ಗ್ರಹಿಕೆ, ಲಿಖಿತಅಭಿವ್ಯಕ್ತಿ, ಅನುಕ್ರಮ | | | |

**ಕ್ಲೋಜ್ ಪ್ಯಾಸೇಜ್ನ ಮಾದರಿ**
**ಸಾರಾಂಶವನ್ನು ಪೂರ್ಣಗೊಳಿಸಲು ಬಾಕ್ಸ್‌ನಲ್ಲಿ ನೀಡಲಾದ ಪದಗಳೊಂದಿಗೆ ಖಾಲಿ ಜಾಗಗಳನ್ನು ಭರ್ತಿಮಾಡಿ.**

ಥಾರ್ಮರು ಭೂಮಿಯು a._________ನ ಪಶ್ಚಿಮದ ಅಂಚಿನಲ್ಲಿದೆ. ಇದು ಮುಖ್ಯವಾಗಿ. b.___________ ಮತ್ತು c. ____________ ರಾಜ್ಯಗಳಲ್ಲಿ ಕಂಡುಬರುತ್ತದೆ. ಇದು d.__________ ಅರ್ಧಚಂದ್ರಾಕಾರವನ್ನು ಒಳಗೊಂಡಿದೆ. ಇದನ್ನು e. _____________ ಬರ್ಚನ್ಸ್ ಎಂದು ಕರೆಯುತ್ತಾರೆ. ಇದು ಒಂದು f. ____________ ಪ್ರದೇಶವಾಗಿದ್ದು ಅದು ಅತಿ g. ____________ ಮಳೆಯನ್ನು ಪಡೆಯುತ್ತದೆ. ಅಲ್ಲಿ ವಿರಳವಾದ ಸಸ್ಯವರ್ಗವಿದೆ. ಇದು ಅರಾವಳಿಗಳ h.______________ ಆಗಿದ್ದು ನೈಋತ್ಯ ಮಾನ್ಸೂನ್‌ಗಳು i._____________ನಲ್ಲಿ ಹಾದು ಹೋಗುತ್ತವೆ.

ಅನುಕೂಲನ: ಓದಲು ಕಷ್ಟಪಡುವ ವಿದ್ಯಾರ್ಥಿಗೆ ರೆಕಾರ್ಡ್ ಮಾಡಿದ ಪಠ್ಯ, ದೃಷ್ಟಿ ದೌರ್ಬಲ್ಯಗಳಿರುವ ವಿದ್ಯಾರ್ಥಿಗೆ ದೊಡ್ಡ ಫಾಂಟ್‌ನಲ್ಲಿ ಮುದ್ರಿತವಾದ ಪಠ್ಯವನ್ನು ಒದಗಿಸುವುದು. (ಸವಾಲುಗಳನ್ನು ಎದುರಿಸುವ ವಿದ್ಯಾರ್ಥಿಗಳು ಸ್ವತಂತ್ರವಾಗಿ ಕೆಲಸ ಮಾಡುವುದನ್ನು ಅನುವಾಗಿಸಲು ಈ ಅನುಕೂಲನವನ್ನು ಒದಗಿಸಲಾಗಿದೆ)

**ದಿನಪತ್ರಿಕೆ ವಿಶ್ಲೇಷಣೆ**

ಕೆಳಗಿನ ಪ್ಯಾಸೇಜ್ ಅನ್ನು ಓದಿ. ಪ್ಯಾಸೇಜಿನ ಆಧಾರದ ಮೇಲೆ ಕನಿಷ್ಠ ಮೂರು ಸಂಬAಧಿತ ಪ್ರಶ್ನೆಗಳನ್ನು ರಚಿಸಿ.

ತುಂಬ ಹಿಂದಿನ ಕಥೆಯೇನಲ್ಲ. ರಾಜಸ್ಥಾನದ ಜೈಸಲ್ಮೇರ್ ಜಿಲ್ಲೆಯ ನಗರ ಪ್ರದೇಶದಿಂದ ದೂರವಿದ್ದ ಸಮುದಾಯಗಳು ಮಳೆರಾಯನ ಕರುಣೆಯನ್ನು ಅವಲಂಬಿಸಿದ್ದು, ವಾರ್ಷಿಕ ಬಾಜ್ರ ಬೆಳೆಯನ್ನು ನಂಬಿಕೊಂಡು ತಮ್ಮ ಜೀವನ ನಡೆಸುತ್ತಿದ್ದರು. 48 ಡಿಗ್ರಿ ಸೆಲ್ಸಿಯಸ್ ಕಠೋರವಾದ ಬೇಸಿಗೆಯ ಬಿಸಿಲು, ಆಗಾಗ್ಗೆ ಕಾಡುತ್ತಿದ್ದ ಮರಳಿನಿಂದ ಕೂಡಿದ ಬಿರುಗಾಳಿ ಮತ್ತು ನೀರಿನ ಕೊರತೆಯು ಅವರ ಉಳಿವಿಗೆ ದೊಡ್ಡ ಸವಾಲನ್ನು ಒಡ್ಡಿತ್ತು. ಬರ ಮತ್ತು ಮರಳಿನ ದಿಬ್ಬಗಳ ಮೇಲೆ ಹರಡಿದ ಒಂಟೆಗಳು ಮತ್ತು ಜಾನುವಾರುಗಳ ಎಲುಬುಗಳ ಭಯವು ಮುಂದೆ ಕಾದಿತ್ತು. ಆದರೆ ೧೯೮೦ ರ ದಶಕದ ಮಧ್ಯಭಾಗದಲ್ಲಿ ಇಂದಿರಾ ಗಾಂಧಿ ಕಾಲುವೆ ಯೋಜನೆಯ (ಐಜಿಸಿಪಿ) ಆಗಮನವು ಎಲ್ಲವನ್ನೂ ಬದಲಾಯಿಸಿತು. ಜೈಸಲ್ಮೇರ್, ಬಾರ್ಮರ್, ಬಿಕಾನೇರ್, ಜೋಧ್‌ಪುರ, ಚುರು, ಹನುಮಾನ್‌ಗಢ ಮತ್ತು ಶ್ರೀಗಂಗಾ ನಗರ ಸೇರಿದಂತೆ ರಾಜ್ಯದ ಏಳು ಜಿಲ್ಲೆಗಳನ್ನು ಒಳಗೊಂಡಿದ್ದ ಕಾಲುವೆಯು ಭೂದೃಶ್ಯವನ್ನು ಮತ್ತು ಅದರ ನಿವಾಸಿಗಳ ಜೀವನವನ್ನು ಪರಿವರ್ತಿಸಿತು. ಕುಡಿಯಲು ಮತ್ತು ನೀರಾವರಿಗೆ ನೀರಿನ ಸುನಿಶ್ಚಿತ ಲಭ್ಯತೆಯಿಂದಾಗಿ ಒಮ್ಮೆ- ಬಂಜರಾಗಿದ್ದ ರಾಜಸ್ಥಾನದ ವಾಯವ್ಯದ ಹೊಲಗಳು ಫಲವತ್ತಾದ ಜಮೀನುಗಳಾಗಿ ಪರಿವರ್ತಿತವಾದವು. ಇದರಿಂದ ವರ್ಷಕ್ಕೆ ಎರಡು ಬೆಳೆಗಳನ್ನು ತೆಗೆಯಲು ಸಾಧ್ಯವಾಯಿತು. “ಈಗ ನಾವು ಗೋಧಿ, ಗ್ವಾರ್ (ಬಟಾಣಿ ಜಾತಿಯ ಕಾಳು), ಸಾಸಿವೆ, ಕಡಲೆಕಾಯಿ, ಜೀರಿಗೆ ಮತ್ತು ಕಾಳುಗಳನ್ನು ಕೊಯ್ಲು ಮಾಡುತ್ತೇವೆ” ಎಂದು ಜೈಸಲ್ಮೇರ್‌ನಿಂದ 75 ಕಿ.ಮೀ. ದೂರದಲ್ಲಿರುವ ಮೋಹನ್‌ಗಢ ಪಂಚಾಯತ್‌ನಹಮೀರ್ನಾಡಕಿಧಾನಿಯಾದ ಸರಪಂಚ್ ಸಮ್ಮಾ ಹೇಳುತ್ತಾರೆ.

**ಸ್ವಯಂ-ಪರ್ಯಾಲೋಚನೆ**

ಪಾಠವನ್ನು ಬೋಧಿಸುವಾಗ ಒದಗಿಸಿದ ಚಿತ್ರಗಳು ಮತ್ತು ಇತರ ದೃಶ್ಯ ಸೂಚನೆಗಳಿಗೆ ತರಗತಿಯು ಒಟ್ಟಾರೆಯಾಗಿ ಉತ್ತಮ ಪ್ರತಿಕ್ರಿಯೆಯನ್ನು ತೋರಿಸಿತು. ಬುದ್ಧಿ ಉತ್ತೇಜಕ ವ್ಯಾಸಂಗಾವಧಿ (brainstormingsession) ಮತ್ತು ರೇಖಾಚಿತ್ರ ರಚಿಸುವ ಚಟುವಟಿಕೆಗಳು ವಿದ್ಯಾರ್ಥಿಗಳು ಸದಾ ಅವುಗಳಲ್ಲಿ ತೊಡಗಿದ್ದು, ವಿಷಯದ ಬಗ್ಗೆ ಯೋಚಿಸುವಂತೆ ಮಾಡಿದವು (ಮುಂಚಿತ-ಓದುವಿಕೆ). ಪದಗಳ ಉಚ್ಚಾರಣಾ ಪ್ರಕ್ರಿಯೆ ಮತ್ತು ಪ್ರಮುಖ ಪದಗಳ ಅರ್ಥವನ್ನು ವಿವರಿಸಲು ಚಿತ್ರಗಳನ್ನು ಬಳಸಿದ್ದು ವಿದ್ಯಾರ್ಥಿಗಳಿಗೆ ಪದಗಳ

ಅರ್ಥವನ್ನು ಅರಿಯಲು ಸಹಾಯ ಮಾಡಿತು. ವಿಷಯವು ಅಮೂರ್ತವಾಗಿ ಇದ್ದುದ್ದರಿಂದ ಅದನ್ನು ಕಂಡಿಕೆಗಳಾಗಿ ವಿಂಗಡಿಸಲಾಯಿತು, ದೃಷ್ಟಿಗೋಚರವಾಗಿ ಪ್ರತಿನಿಧಿಸಲಾಯಿತು ಮತ್ತು ಸ್ನಾಯು ಸಂವೇದನಾ ಚಟುವಟಿಕೆಗಳನ್ನು ಒಳಗೊಳ್ಳಲಾಯಿತು (ಓದುವ ಸಮಯದಲ್ಲಿ). ಹಲವಾರು ಮುಂಚಿನ ಓದಿನ ಚಟುವಟಿಕೆಗಳು, ಕ್ಲೋಜ್ ಪ್ಯಾಸೇಜ್‌ಗಳು ವಿದ್ಯಾರ್ಥಿಗಳಿಗೆ ಪ್ರಮುಖ ಪದಗಳನ್ನು ನೆನಪಿಸಿಕೊಳ್ಳಲು ಸಹಾಯ ಮಾಡಿದವು ಮತ್ತು ವಿದ್ಯಾರ್ಥಿಗಳು ಅದನ್ನು ಉತ್ತಮವಾಗಿ ನಿರ್ವಹಿಸಲು ಸಾಧ್ಯವಾಯಿತು. ಚಟುವಟಿಕೆಗಳು ಮಕ್ಕಳನ್ನು ಸಂಬAಧಪಟ್ಟ ಪರಿಕಲ್ಪನೆಗೆ ಸಂಬAಧಿಸಿದAತೆ ಕೊಂಚ ವಿಭಿನ್ನವಾಗಿಯೂ ಯೋಚಿಸುವಂತೆ ಮಾಡಿತು. ಕೇಳಿದ ಪ್ರಶ್ನೆಗಳಿಗೆ ವಿದ್ಯಾರ್ಥಿಗಳು ನೀಡಿದ ಕೆಲವು ಅಂತಹ ಪ್ರತಿಕ್ರಿಯೆಗಳು ಇಲ್ಲಿವೆ. ಉದಾಹರಣೆಗೆ, ಚರ್ಚೆಯ ಸಮಯದಲ್ಲಿ ವಿದ್ಯಾರ್ಥಿಗಳು ಎತ್ತಿದ ಕೆಲವು ಪ್ರಶ್ನೆಗಳೆಂದರೆ, (ಅವುಗಳನ್ನು ಪದಶಃ ಉಲ್ಲೇಖಿಸಲಾಗಿದೆ):

ಅ. ಮರುಭೂಮಿ ಬಿಸಿಯಾಗಿದ್ದರೂ ಜನರ ಮೈಬಣ್ಣ ಬಿಳುಪಾಗಿದೆ. ಆದರೆ ನೀವು ಚೆನ್ನೈöÊಗೆ ಹೋದಾಗ ಜನರು ಕಪ್ಪುಗಿರುತ್ತಾರೆ. ಏಕೆ? ಕಪ್ಪುಗಿರಲು, ಅವರ ದೇಹದಲ್ಲಿ (ಮರುಭೂಮಿ) ಮೆಲನಿಹ ನೆಚ್ಚಿರತಕ್ಕದ್ದು.

ಬ. ಓಯಸಿಸ್ನಲ್ಲಿ ಮೀನುಗಳಿವೆಯೇ? ನಾನು ಮೀನು ತಿಂದು ಬದುಕುಳಿಯುತ್ತೇನೆ.



ವಿದ್ಯಾರ್ಥಿಗಳು ರಚಿಸಿರುವ ಮರುಭೂಮಿಯ ಚಿತ್ರ. ಕೆಲವರು ಮರುಭೂಮಿಯಲ್ಲಿನ ಮರಳಿನ ಬಿರುಗಾಳಿಯನ್ನು ಚಿತ್ರಿಸಲು ಸಹ ಪ್ರಯತ್ನಿಸಿದ್ದರು



ಮರುಭೂಮಿಯ ಬಗ್ಗೆ ಬರೆಯಲು ಈ ಮಗುವಿಗೆ ಮರುಭೂಮಿಯ ಕಲ್ಪನೆ ಇರಲಿಲ್ಲ. ಆದರೆ ಬೇರೆಯ ಮಕ್ಕಳು ಉತ್ತಮ ವಿವರಣೆಯನ್ನು ಬರೆದಿದ್ದರು

ವಿದ್ಯಾರ್ಥಿಗಳಿಗೆ ಸವಾಲೆನಿಸಿದ ಕ್ಷೇತ್ರವೆಂದರೆ ವೃತ್ತಪತ್ರಿಕೆ ವಿಶ್ಲೇಷಣಾ ವಿಭಾಗ. ಅಲ್ಲಿ ಅವರು ಪರಿಚಯವಿಲ್ಲದ ಪಠ್ಯವನ್ನು ಓದಬೇಕಿತ್ತು. ವಿದ್ಯಾರ್ಥಿಗಳು ಪರಿಚಯವಿಲ್ಲದ ಪದಗಳನ್ನು ಓದುವಲ್ಲಿ ಮತ್ತು ಅರ್ಥಮಾಡಿಕೊಳ್ಳುವಲ್ಲಿ

ಮತ್ತು ಸಾರಾಂಶೀಕರಿಸುವ ನಿಟ್ಟಿನಲ್ಲಿ ಸವಾಲುಗಳನ್ನು ಎದುರಿಸಿದರು. ವೃತ್ತ ಪತ್ರಿಕೆಯಲ್ಲಿನ ಪದಗಳನ್ನು ಒಂದು ವಾಕ್ಯದಲ್ಲಿ ಬಳಸಿ ವಿವರಿಸಲಾಯಿತು ಮತ್ತು ಪ್ರಶ್ನಿಸುವ ಮೂಲಕ ಅವರು ಸಂದರ್ಭೋಚಿತ ಅರ್ಥವನ್ನು ತಾವೇ ತಲಪುವಂತೆ ಸಹಾಯ ಮಾಡಲಾಯಿತು. ಲೇಖನದ ತಿರುಳನ್ನು ಅಂಶಗಳ (points) ರೂಪದಲ್ಲಿ ವಿದ್ಯಾರ್ಥಿಗಳ ಮೂಲಕ ಪಡೆಯಲಾಯಿತು ಮತ್ತು ಮನಸ್ಸಿನ ನಕ್ಷೆಯ ಮೂಲಕ ನಿರೂಪಿಸಲಾಯಿತು. (ಕೆಳಗಿನ ಚಿತ್ರ ನೋಡಿ).




ವಿದ್ಯಾರ್ಥಿಗಳಿಗೆ ಸಾರಾಂಶೀಕರಿಸುವುದು ಸವಾಲಿನದಾಗಿತ್ತು. ಆದರೆ ಶಿಕ್ಷಕರು ಸೂಚನೆಗಳ ರೂಪದಲ್ಲಿ ಪ್ರಶ್ನೆಗಳನ್ನು ಕೇಳಿದಾಗ ವಿದ್ಯಾರ್ಥಿಗಳು ಸೂಕ್ತ ಉತ್ತರಗಳನ್ನು ನೀಡಲು ಸಾಧ್ಯವಾಯಿತು. ಈ ಪ್ರಶ್ನೆಗಳ ಹೊರತಾಗಿಯೂ, ವಿದ್ಯಾರ್ಥಿಗಳು ತಮ್ಮ ಆಲೋಚನೆಗಳನ್ನು ತಮ್ಮ ಮಾತುಗಳಲ್ಲಿ ವ್ಯಕ್ತಪಡಿಸುವುದು ಒಂದು ಸವಾಲೆನಿಸಿತು. ವಿದ್ಯಾರ್ಥಿಗಳ ಆಲೋಚನಾ ಪ್ರಕ್ರಿಯೆಗೆ ಮಾರ್ಗದರ್ಶನ ನೀಡುವ ಸಲುವಾಗಿ ಶಿಕ್ಷಕರು ತಮ್ಮದೇ ದೃಷ್ಟಿಕೋನದಲ್ಲಿ ಒಂದು ಸಾರಾಂಶವನ್ನು ನೀಡಿದರು. ಇದನ್ನು ವಿದ್ಯಾರ್ಥಿಗಳು ವಿರಾಮದ ಅನಂತರವೂ ಸಹ ಬರೆಯಲು ಸಾಧ್ಯವಾಯಿತು. ವ್ಯಾಸಂಗಾವಧಿಯನ್ನು (session) ಮುಕ್ತಾಯಗೊಳಿಸುವ ಸಲುವಾಗಿ ವಿದ್ಯಾರ್ಥಿಗಳನ್ನು ಪ್ಯಾಸೇಜ್‌ಗೆ ಸಂಬAಧಿಸಿದಂತೆ ಮೂರು ಪ್ರಶ್ನೆಗಳನ್ನು ತರುವಂತೆ ಕೇಳಲಾಯಿತು. ಮಾದರಿಗಳನ್ನು ಕೆಳಗೆನೀಡಲಾಗಿದೆ.







ಈ ಚಿತ್ರಗಳು ವೃತ್ತಪತ್ರಿಕೆಯ ಲೇಖನದ ಸಾರಾಂಶದ ಮಾದರಿಯನ್ನು ಮತ್ತು ಅದನ್ನು ಕುರಿತು ರಚಿಸಿದ ಪ್ರಶ್ನೆಗಳನ್ನು ಒಳಗೊಂಡಿವೆ. ವಾಸ್ತವದಲ್ಲಿ, ಪ್ರಶ್ನೆ 2 ರಲ್ಲಿನ who (ಯಾರು) ಎಂಬುದು, 'how (ಹೇಗೆ') ಎಂಬ ಅರ್ಥವನ್ನು ಮತ್ತು ಪ್ರಶ್ನೆ 3 ರಲ್ಲಿನ brought ಎಂಬುದು 'drought' ಎಂಬ ಅರ್ಥವನ್ನು ನೀಡುತ್ತದೆ (ಹಿಂದು ಮುಂದಾಗಿದೆ)

ಮಾದರಿ ೨: ಸರೋಜಿನಿ ನಾಯ್ಡು ಅವರ 'ದಿ ಇಂಡಿಯನ್ ವೀವರ್ಸ್' ಇಂಗ್ಲಿಷ್ ಪಾಠದ ಪಠ್ಯ ರೂಪಾಂತರ.

ಕವಿತೆ, ಚಿಕ್ಕದಾಗಿದ್ದರೂ, ಅಲಂಕೃತ ಭಾಷೆ ಮತ್ತು ಅಮೂರ್ತ ಚಿಂತನೆಯಿAದ ಸಮೃದ್ಧವಾಗಿದೆ. ನಿಮಗೆ ಸಂದರ್ಭದ ಚಿತ್ರಣವನ್ನು ನೀಡಲು ಕವಿತೆಯ ಸಂಕ್ಷಿಪ್ತ ರೂಪವನ್ನು ಇಲ್ಲಿ ನೀಡಲಾಗಿದೆ. ನೇಕಾರರು ಇಡೀ ದಿನ ವಿವಿಧ ಬಣ್ಣಗಳಲ್ಲಿ ವಿವಿಧ ರೀತಿಯ ಬಟ್ಟೆಗಳನ್ನು ನೇಯುತ್ತಿದ್ದಾರೆ. ಪ್ರತಿಯೊಂದು ಬಣ್ಣ ಮತ್ತು ದಿನದ ಸಮಯವು ವ್ಯಕ್ತಿಯ ಜೀವನದಲ್ಲಿನ ಹಂತಗಳನ್ನು ಸಂಕೇತಿಸುತ್ತದೆ. ಮುಂಜಾನೆ, ನವಜಾತ ಶಿಶುವಿಗೆ ಪ್ರಕಾಶಮಾನವಾದ ನೀಲಿ ಬಣ್ಣದ ಬಟ್ಟೆಯನ್ನು ನೇಯಲಾಗುತ್ತದೆ. ಇದು ಹುಟ್ಟು ಮತ್ತು ಸಂತೋಷವನ್ನು ಸಂಕೇತಿಸುತ್ತದೆ; ದಿನದ ಸಮಯದಲ್ಲಿ / ಮುಸ್ಸಂಜೆ ಸಮಯದಲ್ಲಿ ರಾಣಿಯ ಮದುವೆಯ ಮುಖ ಮುಸುಕನ್ನು ಗಾಢ ಬಣ್ಣದ ನೇರಳೆ ಮತ್ತು ಹಸಿರು ಬಟ್ಟೆಯಲ್ಲಿ ನೇಯಲಾಗುತ್ತದೆ. ಇದು ಜೀವನದ ಸಂಭ್ರಮಗಳನ್ನು ಸೂಚಿಸುತ್ತದೆ. ಅಂತಿಮವಾಗಿ, ರಾತ್ರಿ ಮತ್ತು ಸಂಧ್ಯಾ ಕಾಲದಲ್ಲಿ ಶವದ ಬಿಳಿಯ ಬಟ್ಟೆಯನ್ನು ಸಾವಿನ ಸಂಕೇತವಾಗಿ ನೇಯಲಾಗುತ್ತದೆ. ಬಣ್ಣಗಳು ವಿಭಿನ್ನ ಭಾವನೆಗಳು, ಮನಸ್ಥಿತಿಗಳು ಮತ್ತು ಆಲೋಚನೆಗಳನ್ನು ಸಂಕೇತಿಸುತ್ತವೆ. ಉದಾ. ಕೆಂಪು ಬಣ್ಣವು ಪ್ರಣಯ ಮನಸ್ಥಿತಿ ಅಥವಾ ಪ್ರೀತಿ ಮತ್ತು ಅಪಾಯವನ್ನು ಸಂಕೇತಿಸುತ್ತದೆ. ದಿನದ ವಿವಿಧ ಸಮಯಗಳು ಜೀವನದ ವಿವಿಧ ಹಂತಗಳನ್ನು ಪ್ರತಿನಿಧಿಸುತ್ತವೆ. ಬೆಳಗ್ಗೆಯು ಬಾಲ್ಯವನ್ನು, ಸಂಜೆಯು ಯೌವನವನ್ನು ಮತ್ತು ರಾತ್ರಿಯು ಸಾವು ಅಥವಾ ಜೀವನದ ಅಂತ್ಯವನ್ನು ಪ್ರತಿನಿಧಿಸುತ್ತದೆ.

ಪಠ್ಯದ ರೂಪಾಂತರಕ್ಕೆ ಕಾರಣ –ವಿದ್ಯಾರ್ಥಿಯ ಪ್ರೊಫೈಲ್ಮತ್ತು ಒಂದು ಬೋಧನಾ ಪ್ರಯೋಗದ ನಿಟ್ಟಿನಲ್ಲಿ,, ತರಗತಿಯಲ್ಲಿನ ಮಕ್ಕಳು ಸಮಯದ ಪರಿಕಲ್ಪನೆಗಳು, ರೂಪಕಗಳು, ಉಪಮೆಗಳಂತಹ ಸಮೃದ್ಧ ಅಲಂಕೃತ ಪದಗಳನ್ನು ಮತ್ತು ಕೆಲವು ಪರಿಚಯವಿಲ್ಲದ ಪ್ರಮುಖ ಪದಗಳನ್ನು ಗ್ರಹಿಸಲು

ಕಷ್ಟಪಟ್ಟದ್ದು ಕಂಡುಬAದಿದೆ. ಅವರ ಕಲಿಕೆಗೆ ಅನುಕೂಲವಾಗುವಂತೆ ಪಠ್ಯವನ್ನು ರೂಪಾಂತರಿಸಬೇಕಾಯಿತು.

ಇಲ್ಲಿ ತರಗತಿಯು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಲು ಅನುವಾಗುವಂತೆ ಪಾಠವನ್ನು ವಿಭಿನ್ನ ಸ್ವರೂಪದಲ್ಲಿ ಪ್ರತಿನಿಧಿಸಿ ರೂಪಾಂತರಿಸಲಾಗಿದೆ. ಪದ್ಯವು ಚಿಕ್ಕದಾಗಿದ್ದರೂ ಸಹ ಅದರಲ್ಲಿನ ಪರಿಕಲ್ಪನೆಗಳು ಸಂಕೀರ್ಣ ಮತ್ತು ಅಮೂರ್ತವಾಗಿವೆ.

ಈ ವಿಭಾಗದ ಗಮನವು ಮುಂಚಿತವಾಗಿ ಓದುವ ಹಂತದ ಮೇಲಿದೆ. ಶಬ್ದ ಸಂಪತ್ತನ್ನು ಬೆಳೆಸುವುದು ಮತ್ತು ಪಠ್ಯದಲ್ಲಿನ ಪದಗಳಿಗೆ ವಿದ್ಯಾರ್ಥಿಗಳನ್ನು ಪರಿಚಿತಗೊಳಿಸಲು ದೃಶ್ಯೀಕರಣ ಮತ್ತು ಪದಗಳನ್ನು ಓದುವ ಅಭ್ಯಾಸಗಳು ಪ್ರಾಥಮಿಕ ಕಾರ್ಯತಂತ್ರವಾಗಿದೆ. ಅರ್ಥೈಸಿಕೊಳ್ಳಲು ಕಷ್ಟಕರವೆನಿಸಿದ ಕವಿತೆಯೊಂದರ ಭಾವದ ನಿಗೂಢತೆಯನ್ನು ಹೋಗಲಾಡಿಸುವುದು ಸಹ ಉದ್ದೇಶವಾಗಿತ್ತು. ಮುಂಚಿತವಾಗಿ ಓದುವ ವಿಭಾಗದ ಪಾಠ ಯೋಜನೆ ಇಲ್ಲಿದೆ.

| ಉದ್ದೇಶಗಳು | ಕಾರ್ಯತಂತ್ರ/ ಚಟುವಟಿಕೆ | ವಸ್ತು | ಮೌಲ್ಯಮಾಪನ |
|---|---|---|---|
| • ಕವಿತೆಯನ್ನು ಓದುತ್ತಾ ವಿದ್ಯಾರ್ಥಿಗಳಿಗೆ ಚಿತ್ರಗಳನ್ನು ತೋರಿಸಲಾಗುತ್ತದೆ.<br><br>• ವಿದ್ಯಾರ್ಥಿಗಳು ಪ್ರಮುಖ ಪದಗಳನ್ನು ಓದುತ್ತಾರೆ.<br><br>• ವಿದ್ಯಾರ್ಥಿಗಳು ಆಯಾಚಿತ್ರಗಳಿಗೆಪ್ರಮುಖ ಪದಗಳನ್ನು ಹೊಂದಿಸುತ್ತಾರೆ. | **ಕಾರ್ಯತಂತ್ರಗಳು:** ಫ್ಲ್ಯಾಷ್ ಕಾರ್ಡ್ಗಳನ್ನು ತೋರಿಸಿ ಅವುಗಳ ಬಗ್ಗೆ ಹೇಳುವುದು.<br>**ಚಟುವಟಿಕೆ:** ಶಿಕ್ಷಕರು ಪ್ರತಿಚರಣವನ್ನು ಓದುವುದರೊದಿಗೆ, ಓದುವ ಕಾರ್ಡ್ಗಳನ್ನು ತೋರಿಸಲಾಗುತ್ತದೆ.<br><br>ಶಿಕ್ಷಕರ ವಿವರಣೆಯೊಂದಿಗೆ ಪ್ರದರ್ಶನವು ಚಾಲ್ತಿಯಲ್ಲಿರುವಾಗಲೇ ಓದುವ ಕಾರ್ಡ್ಗಳನ್ನು ಪರದೆಯ ಮೇಲೆ ತೋರಿಸಲಾಗುತ್ತದೆ. | ಪವರ್ ಪಾಯಿಂಟ್ ಪ್ರದರ್ಶನ<br><br>ಪಠ್ಯ<br><br>ಓದುವ ಕಾರ್ಡ್ಗಳನ್ನು ಚರಣ ೧-ಬ್ರೇಕ್ ಆಫ್ ಡೇ, ನ್ಯೂ ಬಾರ್ನ್, ಹಾಲ್ಸಿಯಾನ್<br><br>ಚರಣ ೨- ಫಾಲ್ ಆಫ್ ನೈಟ್, ಪ್ಲೂಮ್ಸ್, ಮ್ಯಾರೇಜ್ ವೇಲ್<br><br>ಚರಣ ೩- ಶ್ರೌಡ್, ನೈಟ್, ಮೂನ್ ಲೈಟ್ ಚಿಲ್ | ಪ್ರಮುಖ ಪದಗಳನ್ನು ಓದುವ ಫ್ಲ್ಯಾಷ್ಕಾರ್ಡ್. ಓದುವ ಕಾರ್ಡ್ಗಳಲ್ಲಿ ಕೊಟ್ಟ ಪದಗಳನ್ನು ಗುರುತಿಸಿ ವಿದ್ಯಾರ್ಥಿಗಳು ಆಯಾ ಚಿತ್ರಗಳನ್ನು ಲೇಬಲ್ಮಾಡಲು ಸಾಧ್ಯವಾಗ-ಬೇಕು. |

| ಉದ್ದೇಶಗಳು | ಚಟುವಟಿಕೆ/ ಕಾರ್ಯತಂತ್ರ. | ವಸ್ತು | ಮೌಲ್ಯಮಾಪನ |
|---|---|---|---|
| ವಿದ್ಯಾರ್ಥಿಗಳು ದಿನದ ಸಮಯವನ್ನು ಅನುಕ್ರಮಗೊಳಿಸುತ್ತಾರೆ | **ಕಾರ್ಯತಂತ್ರಗಳು:** ಸ್ಪರ್ಶಕಲಿಕೆ<br><br>ವಿಂಗಡಣೆ<br><br>ಚರ್ಚೆ- ದೈನಂದಿನ | ಓದುವ ಕಾರ್ಡ್ ಗಳು<br><br>ವ್ಯಕ್ತಿಗತ ಚಿತ್ರಗಳು | ಓದುವ ಕಾರ್ಡ್ ಗಳು ಮತ್ತು ಚಿತ್ರಗಳನ್ನು ಬಳಸಿ, ವಿದ್ಯಾರ್ಥಿಗಳು ದಿನದ ಟೈಮ್‌ಲೈನ್ ಅನ್ನು |

| | | | |
|---|---|---|---|
| | ದಿನಚರಿ<br>**ಚಟುವಟಿಕೆ:**<br>ವಿದ್ಯಾರ್ಥಿಗಳು ಮುಂಜಾನೆಗೆ ಸಂಬAಧಿಸಿದ ಪದಗಳನ್ನು ಓದುತ್ತಾರೆ ಮತ್ತು ವಿಂಗಡಿಸುತ್ತಾರೆ. | ಕತ್ತರಿ ಮತ್ತು ಅಂಟು | ಅನುಕ್ರಮಗೊಳಿಸಲು ಸಾಧ್ಯವಾಗಬೇಕು. |
| ವಿದ್ಯಾರ್ಥಿಗಳು ಪಠ್ಯದಲ್ಲಿನ ಬಣ್ಣಗಳಿಗೆ ಭಾವನೆಗಳನ್ನು ಆರೋಪಿಸುತ್ತಾರೆ | **ಕಾರ್ಯತಂತ್ರಗಳು:**<br>ಭೂಮಿಕೆಯ ನಿಭಾವಣೆ (role play)<br>ಶಿಕ್ಷಕ ಪ್ರತಿರೂಪಣ (teacher modelling)<br>ಧ್ವನಿಯ ಏರಿಳಿತ<br>**ಚಟುವಟಿಕೆ:**<br>ಕೊಟ್ಟಿರುವ ಭಾವನೆಯನ್ನು ಅನುಕರಣೆ ಮಾಡುವುದು<br><br>ಸಣ್ಣಭಾಗವನ್ನು ಓದಲಾಗುತ್ತದೆ ಮತ್ತು ಅದರಲ್ಲಿ ಬರುವ ಭಾವನೆಗಳನ್ನು ಹೆಸರಿಸುವಂತೆ ವಿದ್ಯಾರ್ಥಿಗಳನ್ನು ಕೇಳಲಾಗುತ್ತದೆ. | ಬಣ್ಣದ ಕಾರ್ಡ್ ಗಳು-<br><br>ಓದುವ ಕಾರ್ಡ್ ಗಳು - ಪ್ರಮುಖ ಪದಗಳು<br><br>ಓದುವ ಕಾರ್ಡ್ ಗಳು - ಭಾವನೆಗಳು<br><br>ಪ್ರತಿಮೂರು ವಾಕ್ಯಗಳ ವಾಕ್ಯ ವೃಂದಗಳು.<br>ಉದಾ. ಮನೆಗೆ ಹಿಂದಿರುಗುವ ತನ್ನ ಎಲ್ಲ ಬಸ್ಸುಗಳನ್ನು ರಾಜಾ, ತಪ್ಪಿಸಿಕೊಂಡನು. ಅವನು ಭೇಟಿಯಾದ ಆಪ್ತ ಸ್ನೇಹಿತನು ಅವನನ್ನು ಮನೆಗೆ ಬಿಡಲು ಮುಂದಾದನು. | ಒಂದು ಭಾವನೆಯನ್ನು ಪ್ರದರ್ಶಿಸಿದಾಗ, ವಿದ್ಯಾರ್ಥಿಗಳು ಪಠ್ಯ ಆಧಾರಿತವಾದ ಭಾವನಾತ್ಮಕ ಪದವನ್ನು ಬಳಸಲು ಸಾಧ್ಯವಾಗಬೇಕು.<br>ಸೂಕ್ತವಾದ ಓದುವ ಕಾರ್ಡ್ ಅನ್ನು ತೆಗೆದು ತೋರಿಸಬೇಕು.<br>ಭಾವನೆಯನ್ನು ಒಳಗೊಂಡ ಓದುವ ಕಾರ್ಡ್ ಅನ್ನು ನೀಡಿದಾಗ, ವಿದ್ಯಾರ್ಥಿಯು ಅದಕ್ಕನುಗುಣವಾದ ಬಣ್ಣದ ಕಾರ್ಡ್ ಅನ್ನು ಹೊಂದಿಸಲು ಶಕ್ತನಾಗಿರತಕ್ಕದ್ದು.<br>ಅಂತೆಯೇ, ಬಣ್ಣದ ಕಾರ್ಡ್ ಅನ್ನು ನೀಡಿದಾಗ, ವಿದ್ಯಾರ್ಥಿಯು ಅದಕ್ಕೆ ಅನುಗುಣವಾದ ಭಾವನೆಯನ್ನೊಳಗೊಂಡ ಓದುವ ಕಾರ್ಡ್ ಅನ್ನು ಹೊಂದಿಸಲು ಶಕ್ತನಾಗಿರತಕ್ಕದ್ದು. |



ಚಿತ್ರ. 3: ಶಬ್ದಸಂಪತ್ತು ಮತ್ತು ಪರಿಕಲ್ಪನಾ ಗ್ರಹಿಕೆಯನ್ನು ಬೆಳೆಸಲು ಸಹಾಯಕವಾದ ಚಿತ್ರಗಳ ಪ್ರಸ್ತುತಿ.

**Text Representation:**



Indian Weavers: Sarojini Naidu

DURING READING: 1

| POEM Word | Meaning |
|---|---|
| break of day | dawn |
| garment | cloth |
| new-born | baby |
| fall of night | dusk |
| plumes | feather |

Objectives : Should know – poem, rhyming , emotions
Will understand – main idea via pictures, table – compare & contrast, explanation

Weavers, weaving at break of day,
Why do you weave a garm ent so gay?
Blue as the wing of halcyon wild
We weave the robes of a new-born child.

Weavers, weaving at fall of night,
Why do you weave a garm ent so bright?
Like the plum es of a peacock, purple and green
We weave the m arriage veils of a queen

Weavers, weaving solem n and still
What do you weave in the m oonlight chill?
White as a feather and white as a cloud
We weave a dead m an's funeral shroud.

| Stage of life | Time of day | cloth | colour | Compared to | emotion | Occasion | Person |
|---|---|---|---|---|---|---|---|
| 1. Birth | break of day | robe | blue | Halcyon | Gay | birth | new born |
| 2. Youth | fall of night | veil | purple & green | Peacock | Excitement | wedding | queen/bride |
| 3. Death | moonlight | shroud | white | Feather & cloud | Solemn & still | funeral | dead man |

ಚಿತ್ರ 4: ಮೇಲಿನ ಚಿತ್ರದಲ್ಲಿ ತೋರಿಸಿರುವಂತೆ ಇಡೀ ಪದ್ಯವನ್ನು ಒಂದು ಕೋಷ್ಟಕದ ರೂಪದಲ್ಲಿ ನಿರೂಪಿಸಲಾಗಿದೆ. ಈ ಪ್ರಾತಿನಿಧ್ಯದ ಶೈಲಿ, ಗುಂಪಿನ ರೂಪದ ವಿಂಗಡನೆ,

ಮತ್ತು ಹಿಂದಿನ ಚಿತ್ರಗಳು ಪಠ್ಯದ ಓದುವಿಕೆ ಮತ್ತು ವಿವರಣೆಯ ಸಮಯದಲ್ಲಿ ಸಹಾಯ ಮಾಡಿದವು. ಆದಾಗ್ಯೂ, ಈ ಎಲ್ಲಾ ವ್ಯವಸ್ಥೆಗಳನ್ನು ಒದಗಿಸಿದ್ದಾಗ್ಯೂ ಸಹ, ಒಬ್ಬ ವಿದ್ಯಾರ್ಥಿಯು ಪಠ್ಯವನ್ನು ಗ್ರಹಿಸಲು ಸಾಧ್ಯವಾಗಲಿಲ್ಲ. ಪದಗಳು ಕಷ್ಟವಿದ್ದದ್ದು ಅವನಿಗೆ ಸಮಸ್ಯೆಯಾಗಿರಲಿಲ್ಲ. ಆದರೆ ಪಠ್ಯವನ್ನು ಪ್ರತಿಮಾಡಲು(copy) ಮತ್ತು ಕೋಷ್ಟಕದ ರೂಪದಲ್ಲಿ ಭಾಷಾಂತರಿಸಲು ಅವನಿಗೆ ಕಷ್ಟವಾಯಿತು. ಆಲಿಸುವುದನ್ನು ಗ್ರಹಿಸುವ ಜೊತೆ ಸಂಯೋಜಿಸಿದ ಈ ಕೆಳಗಿನ ಚಟುವಟಿಕೆಯನ್ನು ಅವನು ಉತ್ತಮವಾಗಿ ನಿರ್ವಹಿಸಿದನು.

ಪಠ್ಯದ ಪ್ರಾತಿನಿಧ್ಯ:

ಇಂಡಿಯನ್ ವೀವರ್ಸ್: ಸರೋಜಿನಿ ನಾಯ್ಡು

ಓದುವ ಸಂದರ್ಭ: 1

| **ಪದ್ಯದಲ್ಲಿನ ಪದ** | **ಅರ್ಥ** |
|---|---|
| ಬ್ರೇಕ್ ಆಫ್ ಡೇ | ಮುಂಜಾನೆ |
| ಗಾರ್ಮೆಂಟ್ | ಬಟ್ಟೆ |
| ನ್ಯೂ-ಬಾರ್ನ್ | ನವಜಾತ ಶಿಶು |
| ಫಾಲ್ ಆಫ್ ನೈಟ್ | ಸಂಜೆ |
| ಪ್ಲ್ಯೂಮ್ಸ್ | ಗರಿ |

**ಉದ್ದೇಶಗಳು:** ಪದ್ಯ, ಪ್ರಾಸ, ಭಾವನೆಗಳನ್ನು ತಿಳಿದುಕೊಳ್ಳಬೇಕು. ಚಿತ್ರಗಳ ಮುಖೇನ ಪ್ರಮುಖ ವಿಚಾರಗಳನ್ನು, ಕೋಷ್ಟಕದ ಮೂಲಕ ತುಲನೆ ಮತ್ತು ವ್ಯತ್ಯಾಸಗಳನ್ನು, ವಿವರಣೆಯನ್ನು ಅರ್ಥಮಾಡಿಕೊಳ್ಳಬೇಕು.

| **ಜೀವನದ ಹಂತ** | **ದಿನದ ಸಮಯ** | **ಬಟ್ಟೆ** | **ಬಣ್ಣ** | **ಯಾವುದಕ್ಕೆ ಹೋಲಿಸಲಾಗಿದೆ** | **ಭಾವನೆ** | **ಸಂದರ್ಭ** | **ವ್ಯಕ್ತಿ** |
|---|---|---|---|---|---|---|---|
| 1. ಹುಟ್ಟು | ಮುಂಜಾನೆ | ನಿಲುವಂಗಿ | ನೀಲಿ | ಹ್ಯಾಲ್ಸಿಯನ್ (ಪ್ರಾಚೀನ ಪಕ್ಷಿ) | ಸಂತೋಷ | ಹುಟ್ಟು | ನವಜಾತ ಶಿಶು |
| 2. ಯೌವನ | ಸಂಜೆ | ಮುಖಮುಸುಕು | ನೇರಳೆ ಮತ್ತು ಹಸಿರು | ನವಿಲು | ಸಂಭ್ರಮ | ಮದುವೆ | ರಾಣಿ/ ಮದುಮಗಳು |
| 3. ಸಾವು | ರಾತ್ರಿ | ಹೆಣದ ಮೇಲಿನ ಹೊದಿಕೆ | ಬಿಳುಪು | ಗರಿ ಮತ್ತು ಮೋಡ | ಗಂಭೀರ ಮತ್ತು ನಿಶ್ಚಲ | ಅಂತ್ಯಕ್ರಿಯೆ | ಮೃತ ವ್ಯಕ್ತಿ |

**Indian Weavers: Sarojini Naidu**

During Reading 2- Read each stanza. Discuss questions that follow:

*Weavers, weaving at break of day,*
*Why do you weave a garment so gay?*
*Blue as the wing of halcyon wild*
*We weave the robes of a new-born child.*

1. Who is the poet addressing?
2. When are they weaving the cloth?
3. What is being compared?
4. What is the weavers' reply?

*Weavers, weaving at fall of night,*
*Why do you weave a garment so bright?*
*Like the plumes of a peacock, purple or green*
*We weave the marriage veils of a queen*

1. State the time mentioned in this verse
2. What type is being woven here?
3. What is the colour of the plumes?
4. What is the veil?

*Weavers weaving solemn and still*
*What do you weave in the moonlight chill?*
*White as a feather and white as a cloud*
*We weave a dead man's funeral shroud*

1. Mention the time of reference
2. What is the colour of the cloth?
3. What is the weaver's reply?
4. Trace the words in the stanza that mean

a) calm b) serious

ಚಿತ್ರ 5: ಓದುವಿಕೆ ಮತ್ತು ಪ್ರಶ್ನಿಸುವಿಕೆಗಳ ನಿಟ್ಟಿನ ಶಿಕ್ಷಕರ ಪ್ರತಿರೂಪಣ(modelling)ದೊಂದಿಗೆ, ಎಲ್ಲ ವಿದ್ಯಾರ್ಥಿಗಳು ಚಿತ್ರಗಳನ್ನು ಪ್ರಮುಖ ಪದಗಳೊಂದಿಗೆ ಜೋಡಿಸಲು ಸಾಧ್ಯವಾಯಿತು ಮತ್ತು ಇವುಗಳನ್ನು ಅವರ ಓದಿಕೆಯ ಗ್ರಹಿಕೆಯನ್ನು ವೃದ್ಧಿಸಿಕೊಳ್ಳುವ ಸಾಧನವಾಗಿ ಬಳಸಿದರು.

**ಇಂಡಿಯನ್ ವೀವರ್ಸ್: ಸರೋಜಿನಿ ನಾಯ್ಡು**

ಓದುವ ಸಂದರ್ಭ 2: ಪ್ರತಿ ಚರಣವನ್ನು ಓದಿ. ಕೆಳಗಿನ ಪ್ರಶ್ನೆಗಳನ್ನು ಚರ್ಚಿಸಿರಿ.

ಪದ್ಯದ ಚರಣ 1

1. ಕವಿಯು ಯಾರ ಬಗ್ಗೆ ಮಾತನಾಡುತ್ತಿದ್ದಾರೆ?
2. ಅವರು ಯಾವಾಗ ಬಟ್ಟೆಯನ್ನು ನೇಯುತ್ತಿದ್ದಾರೆ?
3. ಏನನ್ನು ತುಲನೆ ಮಾಡಲಾಗುತ್ತಿದೆ?
4. ನೇಕಾರರ ಉತ್ತರ ಏನು?

ಪದ್ಯದ ಚರಣ 2

1. ಈ ಪದ್ಯದ ಸಾಲುಗಳಲ್ಲಿ ನಮೂದಿತವಾದ ಸಮಯವು ಯಾವುದು?
2. ಯಾವ ರೀತಿಯ ಬಟ್ಟೆಯನ್ನು ಇಲ್ಲಿ ನೇಯಲಾಗುತ್ತಿದೆ?
3. ಗರಿಗಳ ಬಣ್ಣ ಯಾವುದು?
4. ಮುಖಮುಸುಕು ಎಂದರೆ ಏನು?

ಪದ್ಯದ ಚರಣ 3

1. ಸಂದರ್ಭದ ಸಮಯವನ್ನು ತಿಳಿಸಿ.
2. ಬಟ್ಟೆಯ ಬಣ್ಣ ಯಾವುದು?
3. ನೇಕಾರರ ಉತ್ತರ ಏನು?
4. ಚರಣದಲ್ಲಿ ಕೆಳಗಿನ ಪದಗಳ ಅರ್ಥವನ್ನು ಹೋಲುವ ಪದಗಳನ್ನು ಹುಡುಕಿ.

   ಅ. ಕಾಮ್ (ಶಾಂತವಾಗಿರುವುದು) ಬ. ಸೀರಿಯಸ್(ಗಂಭೀರ)




ಚಿತ್ರ 6: ಇದು ಮೌಲ್ಯಮಾಪನಕ್ಕೆ ದಾರಿ ಮಾಡಿಕೊಡುವ ಓದಿನ ಅನಂತರದ ಕೆಲಸಗಳ ಸ್ಥೂಲಚಿತ್ರ. ಜೊತೆಗೆ, ಬೃಂದಾವನದಲ್ಲಿ ವಿದ್ಯಾರ್ಥಿಗಳಿಗೆ ನಾವು ಪ್ರಶ್ನೆಪತ್ರಿಕೆಗಳಲ್ಲಿನ ಪ್ರಶ್ನೆಗಳನ್ನು ಓದಲು ಮತ್ತು ಅರ್ಥಮಾಡಿಕೊಳ್ಳಲು ಸಹ ಸ್ಪಷ್ಟವಾಗಿ ಕಲಿಸುತ್ತೇವೆ. ಎನ್ಐಓಎಸ್ ಮಾದರಿಯ ಪ್ರಶ್ನೆಗಳು ಹೆಚ್ಚಾಗಿ ಅನ್ವಯವನ್ನು-ಆಧರಿಸಿದ ಪ್ರಶ್ನೆಗಳಾಗಿವೆ. ಆದ್ದರಿಂದ ಓದಿನ ಗ್ರಹಿಕೆಯ ಕಾರ್ಯಕ್ರಮದ ನಿರ್ಣಾಯಕ ಭಾಗವು ಸೂಚನೆಗಳನ್ನು ಅರ್ಥಮಾಡಿಕೊಳ್ಳುವುದರ ಮೇಲೆ ಒತ್ತು ನೀಡುತ್ತದೆ. ಏಕೆಂದರೆ, ಅದು ನಿಖರವಾದ ಫಲಿತಾಂಶವನ್ನು ಉಂಟುಮಾಡುತ್ತದೆ.

**ಇಂಡಿಯನ್ ವೀವರ್ಸ್: ಸರೋಜಿನಿ ನಾಯ್ಡು**

ಅನಂತರದ ಓದುವಿಕೆ:

**ಪ್ರಮುಖ ಕಲ್ಪನೆ:** ದಿನದ ವಿವಿಧ ಸಮಯವು ಜೀವನದ ವಿವಿಧ ಹಂತಗಳನ್ನು ಪ್ರತಿನಿಧಿಸುತ್ತದೆ.

- ಮುಂಜಾನೆಯು ಬಾಲ್ಯವನ್ನು ಪ್ರತಿನಿಧಿಸುತ್ತದೆ.
- ಸಂಜೆಯು ಯೌವನವನ್ನು ಪ್ರತಿನಿಧಿಸುತ್ತದೆ.
- ರಾತ್ರಿಯು ಸಾವನ್ನು ಅಥವಾ ಬದುಕಿನ ಅಂತ್ಯವನ್ನು ಪ್ರತಿನಿಧಿಸುತ್ತದೆ.

ಬಣ್ಣಗಳು ವಿವಿಧ ಭಾವನೆಗಳನ್ನು ಸಂಕೇತಿಸುತ್ತವೆ.

**ಕಾರ್ಯಹಾಳೆ(worksheet)- ಪರಿಕಲ್ಪನೆಯ ಗ್ರಹಿಕೆ**

ಇದು _______________ರಿಂದ ಬರೆಯಲ್ಪಟ್ಟ _____________.

ಇದು ______________ ಸಮುದಾಯದಲ್ಲಿ ನೆಲೆಗೊಂಡಿದೆ.

ಈ ವಸ್ತುವಿಷಯ/ ಪದ್ಯವು _________________ ಬಗ್ಗೆ ಇದೆ.

ಇಂಡಿಯನ್ ವೀವರ್ಸ್ ___________ನಿಂದ ಸಮೃದ್ಧವಾಗಿದೆ ಮತ್ತು ________ಅನ್ನು ಒಳಗೊಂಡಿದೆ.

ಪಾಠದ ಪ್ರಶ್ನೋತ್ತರಗಳು:

- ಬಹು-ಆಯ್ಕೆಯ ಉತ್ತರಗಳು
- ಕ್ಲೋಜ್
- ಪ್ರಶ್ನೋತ್ತರಗಳು
- ಕ್ರಮದಲ್ಲಿ ಜೋಡಿಸಿ
- ಹೊಂದಿಸಿ ಬರೆಯಿರಿ
- ಅನುಕ್ರಮದಲ್ಲಿ ಬರೆಯಿರಿ

ಉಪಮೆಗಳನ್ನು ಕುರಿತ ಅಭ್ಯಾಸಗಳು

**ಸಾರಾಂಶ:**

"ಇಂಡಿಯನ್ ವೀವರ್ಸ್" ಎಂಬುದು ಮೂರು ಚರಣಗಳನ್ನು ಒಳಗೊಂಡ ಒಂದು ಪದ್ಯ. ಪದ್ಯದ ಭಾಷೆಯು ಪ್ರಾಸಬದ್ಧವಾಗಿದೆ ಮತ್ತು ಸಂಕೇತ ಪದಗಳನ್ನು ಒಳಗೊಂಡಿದೆ. ನೇಕಾರರು ಇಡೀ ದಿನ ವಿವಿಧ ಬಣ್ಣದ ಬಟ್ಟೆಗಳನ್ನು ನೇಯುವುದರಲ್ಲಿ ನಿರತರಾಗಿದ್ದಾರೆ. ಪ್ರತಿಯೊಂದು ಬಣ್ಣ ಹಾಗೂ ದಿನದ ಸಮಯವು ವ್ಯಕ್ತಿಯೋರ್ವನ ಜೀವನದ ವಿವಿಧ ಹಂತಗಳನ್ನು ಸಂಕೇತಿಸುತ್ತದೆ. ಮುಂಜಾನೆ ಅವರು ನವಜಾತ ಶಿಶುವಿಗೆ ಪ್ರಕಾಶಮಾನವಾದ ನೀಲಿ ಬಣ್ಣದ ಬಟ್ಟೆಯನ್ನು ನೇಯುತ್ತಾರೆ. ಇದು ಹುಟ್ಟು ಮತ್ತು ಸಂತೋಷವನ್ನು ಸಂಕೇತಿಸುತ್ತದೆ. ಹಗಲಿನ ಸಮಯದಲ್ಲಿ ಅವರು ರಾಣಿಯ ಮದುವೆಯ ಮುಖಮುಸುಕನ್ನು ಪ್ರಕಾಶಮಾನವಾದ ನೇರಳೆ ಮತ್ತು ಹಸಿರು ಬಣ್ಣದ ಬಟ್ಟೆಯಿಂದ ನೇಯುತ್ತಾರೆ. ಇದು ಜೀವನದ ಸಂಭ್ರಮಾಚರಣೆಗಳನ್ನು ಸಂಕೇತಿಸುತ್ತದೆ. ಅಂತಿಮವಾಗಿ, ಅವರು ರಾತ್ರಿಯಲ್ಲಿ ಸತ್ತವರ ಮೇಲೆ ಹೊದಿಸಲು ಬಿಳಿಯ ಬಣ್ಣದ ಬಟ್ಟೆಯನ್ನು ನೇಯುತ್ತಾರೆ.

**ಉಲ್ಲೇಖಗಳು:**


Beck, IsabelL, and Margaret G McKeown. *Improving Comprehension With Questioning. The Author.* New York, N.Y.,Scholastic,2006,.

Coiro,Julie.'Predicting Reading Comprehension Onhe Internet.',*Journal Of Literacy Research*, vol43, no.4, 2011, pp.352-392. *SAGE Publications*, doi:10.1177/1086296x11421979.

Israel, Susan E, and Gerald G Duffy. *Handbook Of Research On Reading Comprehension, Second Edition*. NewYork, Guilford Publications, 2016,.

Kieffer, Michael J., and Nonie K. Lesaux. 'Breaking Down Words To Build Meaning: Morphology, Vocabulary, And Reading Comprehension In The Urban Classroom. '*The Reading Teacher*, vo l61, no.2, 2007, pp.134-144. *Wiley-Blackwell*, doi:10.1598/rt.61.2.3.

Rose,Terry L. ‘Effects Of Illustrations On Reading Comprehension Of Learning Disabled Students. ‘*Journal Of Learning Disabilities*, vol19, no.9, 1986, pp.542-544. *SAGE Publications*, doi:10.1177/002221948601900905.

‘Teaching Reading Comprehension’, *Bellarmine. Edu*, 2017, https://www.bellarmine.edu/docs/default-source/ education_ docs/ Reutzel_ Cooter_Comprehension_TCR_5e_2.aspx.
Vellutino, Frank R. et al. ‘Differentiating Between Difficult- To-Remediate And Readily Remediated Poor Readers. ‘*Journal Of Learning Disabilities*, vol.33, no.3, 2000, pp.223-238. SAGE Publications,doi:10.1177/002221940003300302.

“Francis Bacon Quotes.” Brainy Quote.com. Xplore Inc, 2017. 24 December 2017. https://www.brainyquote.com/ quotes/ francis_ bacon_ 399408 APA Style Citation

Francis Bacon Quotes. (n.d.). Brainy Quote.com. Retrieved December 24, 2017, from Brainy Quote.com Website: https://www.brainyquote.com/ quotes/ francis_bacon_399408

ವೀಣಾ ಅವರು ಬೆಂಗಳೂರಿನ ಬೃಂದಾವನ ಶಿಕ್ಷಣ ಟ್ರಸ್ಟ್‌ನಲ್ಲಿನ ಹಿರಿಯ ಕೇಂದ್ರದಲ್ಲಿ ಸಂಯೋಜಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇಂಗ್ಲಿಷ್, ಗೃಹ ವಿಜ್ಞಾನ, ಅರ್ಥಶಾಸ್ತ್ರ ಮತ್ತು ವ್ಯವಹಾರ ಅಧ್ಯಯನಗಳು ಸೇರಿದಂತೆ ಮಾಧ್ಯಮಿಕ ಹಂತದಲ್ಲಿ ಹಲವಾರು ವಿಷಯಗಳನ್ನು ಕಲಿಸಿದ್ದಾರೆ. ಹಿರಿಯ ಮಾಧ್ಯಮಿಕ ಹಂತದಲ್ಲಿ ಸಹ ಅರ್ಥಶಾಸ್ತ್ರ ಮತ್ತು ವ್ಯವಹಾರ ಅಧ್ಯಯನಗಳನ್ನು ಕಲಿಸಿರುವ ಅವರು, ಬೃಂದಾವನಕ್ಕೆ ಸೇರುವ ಮೊದಲು 15 ವರ್ಷಗಳ ಕಾಲ ಮುಖ್ಯವಾಹಿನಿಯಲ್ಲಿರುವ ಶಾಲೆಯೊಂದರಲ್ಲಿ ಶಿಕ್ಷಕಿಯಾಗಿದ್ದರು. ಬೃಂದಾವನದೊಂದಿಗೆ 17 ವರ್ಷಗಳಿಂದ ತೊಡಗಿರುವ ಅವರು, ಅರ್ಥಶಾಸ್ತ್ರದಲ್ಲಿ ಎಂ.ಎ. ಪದವಿ ಮತ್ತು ಬಿ.ಎಡ್., ಪದವಿಯನ್ನು ಪಡೆದಿದ್ದಾರೆ. ಇವರನ್ನು brindavan.srcentre@gmail.com ಇಲ್ಲಿ ಸಂಪರ್ಕಿಸಬಹುದು.

ಶ್ವೇತಾ ಅವರು ಪ್ರಸ್ತುತ ಬೆಂಗಳೂರಿನ ಬೃಂದಾವನ ಶಿಕ್ಷಣ ಟ್ರಸ್ಟ್‌ನಲ್ಲಿನ ಹಿರಿಯ ಕೇಂದ್ರದಲ್ಲಿ ಸಂಯೋಜಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಅವರು ಬೃಂದಾವನದೊಂದಿಗೆ 9 ವರ್ಷಗಳಿಂದ ಇದ್ದಾರೆ. ಇದಕ್ಕೂ ಮುನ್ನ ಎನ್‌ಐಇಯಲ್ಲಿ ಕಾರ್ಯನಿರ್ವಹಿಸಿದ್ದು, ಸಂವಹನಾ ಮತ್ತು ಮನಶ್ಶಾಸ್ತ್ರದಲ್ಲಿ ಬಿ.ಎ ಪದವಿಯನ್ನು, ಇಂಗ್ಲಿಷ್ ಹಾಗೂ ಸಮನ್ವಯ ಮತ್ತು ವಿಶೇಷ ಶಿಕ್ಷಣದಲ್ಲಿ ಎಂ.ಎ. ಪದವಿಯನ್ನೂ ಪಡೆದಿದ್ದಾರೆ. ಅವರನ್ನು cshekhar.shweta@gmail.com ಇಲ್ಲಿ ಸಂಪರ್ಕಿಸಬಹುದು.

ನೇಹಾ ಅವರು ಬೃಂದಾವನದೊಂದಿಗೆ ಒಂದು ವರ್ಷದಿಂದ ಇದ್ದಾರೆ. ಎಸ್ ಎಸ್ ಎಲ್ ಸಿ ಮತ್ತು ಹಿರಿಯ ಮಾಧ್ಯಮಿಕ ಹಂತಗಳಲ್ಲಿ ಮುಂಚಿತ-

ಎನ್‌ಐಓಎಸ್‌ನ ವಿಶೇಷ ಶಿಕ್ಷಕರಾಗಿ ಕೆಲಸ ಮಾಡುತ್ತಾರೆ. ವ್ಯವಹಾರ ಅಧ್ಯಯನ, ಅರ್ಥಶಾಸ್ತ್ರ, ಸಮಾಜಶಾಸ್ತ್ರ, ಮತ್ತು ಸಮೂಹ ಸಂವಹನವನ್ನು ಕಲಿಸುವ ಅವರು, ಕೋಪ ನಿರ್ವಹಣೆ ಮತ್ತು ಜೀವನ ಕೌಶಲ್ಯಗಳ ಅಭಿವೃದ್ದಿಗೆ ಸಹಾಯ ಮಾಡುವ ವಸ್ತುವಿಷಯ ಆಧಾರಿತ ಚಟುವಟಿಕೆಗಳನ್ನು ಸಹ ಆಯೋಜಿಸುತ್ತಾರೆ. ಬೃಂದಾನವಕ್ಕೆ ಸೇರುವ ಮುನ್ನ, ಎರಡು ವರ್ಷಗಳ ಕಾಲ ಸಮನ್ವಯ ವ್ಯವಸ್ಥೆಯಲ್ಲಿ ಕೆಲಸವನ್ನು ನಿರ್ವಹಿಸಿದ್ದು, ಮನಶ್ಶಾಸ್ತ್ರ, ಸಮಾಜಶಾಸ್ತ್ರ, ಮತ್ತು ಅರ್ಥಶಾಸ್ತ್ರ ವಿಷಯಗಳಲ್ಲಿ ಬಿ.ಎ. ಪದವಿಯನ್ನು, ಪಠ್ಯಕ್ರಮ ಹಾಗೂ ಅಧ್ಯಾಪನದಲ್ಲಿನ ವಿಶೇಷಜ್ಞತೆಯೊಂದಿಗೆ, ಶಿಕ್ಷಣಶಾಸ್ತ್ರದಲ್ಲಿ ಎಂ.ಎ. ಪದವಿಯನ್ನು ಮತ್ತು ವಿಶೇಷ ಶಿಕ್ಷಣದಲ್ಲಿ ಡಿಪ್ಲೊಮಾ ಪದವಿಯನ್ನೂ ಪಡೆದಿದ್ದಾರೆ. ಅವರನ್ನು np101091@gmail.com ಇಲ್ಲಿ ಸಂಪರ್ಕಿಸಬಹುದು.